# ರಸಭರಿತ... ಮನಮೆಚ್ಚಿಕೆ... ಬಲು ಇಷ್ಟ.






ಹೊಸ ಪಾರ್ಲೆ

# ಪಾಪಿನ್ಸ್

## ಹಣ್ಣುಗಳ ಸ್ವಾದವುಳ್ಳ ಮಿಠಾಯಿಗಳು

ಐದು ಹಣ್ಣುಗಳ ಸ್ವಾದವುಳ್ಳ 13 ರುಚಿಕರವಾದ ಮಿಠಾಯಿಗಳು ಪ್ರತಿಯೊಂದೂ ಆಕರ್ಷಕವಾದ, ಕಡಿಮೆ ಬೆಲೆಯ ಪ್ಯಾಕ್‌ನಲ್ಲಿ! ನಿಂಬೆ, ಕಿತ್ತಳೆ, ಮೊಸಂಬಿ, ಅನಾನಸ್ ಮತ್ತು ರಾಸ್ಬೆರಿ ಹಣ್ಣುಗಳ ಸ್ವಾದಗಳು!

**ಪಾಪಿನ್ಸ್‌ನ ರುಚಿ ನೋಡಿರಿ— ಅದರ ಮಜಾ ಪಡೆಯಿರಿ**

everest/122/PP kan.







by
**THE NATIONAL TRADING CO.**
Manufacturers of
**KASHMIR SNOW BEAUTY AIDS**
BOMBAY-2. MADRAS-32.

# ನೂತನ ಪ್ರಪಂಚದ ವಿದ್ಯಾರ್ಥಿಗಳಿಗಾಗಿ.
# ಸ್ವಾನ್ ಪೆನ್ನುಗಳು







ಸ್ವಾನ್ ಪೆನ್ನುಗಳು ಆಧುನಿಕ ಪೀಳಿಗೆಯ
ವಿದ್ಯಾರ್ಥಿಗಳಿಗಾಗಿವೆ. ಕೇವಲ ಸ್ವಾನ್
ಪೆನ್ನುಗಳು ಮಾತ್ರ ಅತ್ಯಂತ ಸರಳವಾಗಿ
ಸುಲಭವಾಗಿ ಬರೆಯುತ್ತವೆ. ಸ್ವಾನ್ಸ್
ಇಲ್ಲವೆ ಕೇಂಬ್ರಿಜ್ ಪೆನ್ನ್ ಕೊಂ
ಹಾಗೂ ನಿರಂತರವಾಗಿ



ಉತ್ತಮ
ಸ್ವಾನ್ ಡೀ
ಶಾಯಿ



**ಸ್ವಾನ್ (ಇಂಡಿಯಾ) ಪ್ರೈವೇಟ್ ಲಿಮಿ**


TRADE MARK

ಅಡ್ವಾನಿ ಚೇಂಬರ್ಸ್, ಪಿ. ಮೆಹತಾ ರೋಡ್,
ಪಾಟ್ 84ಬಿ. ಕನ್ನಾಟ್ ಪ್ಲೇಸ್ ನವ ದಿಲ್ಲಿ.





# ಚಂದಮಾಮ

ಸಂಸ್ಥಾಪಕರು : ನಾಗಿರೆಡ್ಡಿ
ಸಂಚಾಲಕರು : 'ಚಕ್ರಪಾಣಿ'

---

ಕಷ್ಟಪಟ್ಟವರಿಗೆ ತಕ್ಕ ಸೌಕರ್ಯಗಳನ್ನೊದಗಿಸಿದಾಗ ಸಂತೋಷವಾಗುತ್ತದೆ; ತಮಗೆ ಸುಖಸೌಕರ್ಯಗಳನ್ನೊದಗಿಸಿದವರ ಮೇಲೆ ಕೃತಜ್ಞತೆ ಮೂಡುತ್ತದೆ. ಆ ಕೃತಜ್ಞತೆಯ ಸೂಚಕವಾಗಿ ತಮಗಾಗಿ ದುಡಿದವರಿಗೆ ಏನಾದರೂ ಕೊಡಬೇಕೆನಿಸುತ್ತದೆ. ಹಣವಿದ್ದವರು ಏನಾದರೂ ಪಾರಿತೋಷಿಕ ಕೊಟ್ಟು ಹೋಗುತ್ತಾರೆ. ಕ್ರಮೇಣ ಪಾರಿತೋಷಿಕ ಪಡೆಯುವವರಲ್ಲಿ ಹಣದ ರುಚಿ ಅಂಟಿಕೊಂಡು 'ಲಂಚ'ವಾಗಿ ಪರಿಣಮಿಸಿ ಒತ್ತಾಯಕ್ಕೆ ಪ್ರೇರೇಪಿಸುತ್ತದೆ. ಲಂಚಕ್ಕೆ ಮೂಲ ಕೊಡುವವರದೇ ಎಂದು ಈ ಸಂಚಿಕೆಯ "ಅಧರ್ಮ ಛತ್ರ" ಎಂಬ ಕತೆಯಿಂದ ಮನಗಾಣಬಹುದು.

---

ಸಂಪುಟ: ೪೮] ಮೇ '೭೨ [ಸಂಚಿಕೆ ೫










ಕರ್ಮಾಯತ್ತಂ ಫಲಂಪುಂಸಾಂ
ಬುದ್ಧಿಃ ಕರ್ಮಾನುಸಾರಿಣೀ
ತಥಾಪಿ ಸುಧಿಯಾ ಭಾವ್ಯಂ
ಸುವಿಚಾರ್ಯೈವ ಕುರ್ವತಾ ೧

ಮಾನವರಿಗೆ ಅವರ ಕರ್ಮಕ್ಕೆ ತಕ್ಕಂತೆ ಫಲವಿರುತ್ತದೆ; ಕರ್ಮಕ್ಕೆ ತಕ್ಕಂತೆ ಬುದ್ಧಿ ನಡೆಯುತ್ತದೆ. ಆದರೂ ಬುದ್ಧಿವಂತನು ಆಲೋಚಿಸಿ ಕೆಲಸ ಮಾಡಬೇಕು.

ಕುದೇಶಂಚ ಕುವೃತ್ತಿಂಚ
ಕುಭಾರ್ಯಾಂ ಕುನದೀಂ ತಥಾ
ಕುದ್ರವ್ಯಂಚ ಕುಭೋಜ್ಯಂಚ
ವರ್ಜಯೇತ್ತು ವಿಚಕ್ಷಣಃ ೨.

ಕೆಟ್ಟ ದೇಶವನ್ನೂ, ಕೆಟ್ಟ ಕೆಲಸವನ್ನೂ ಕೆಟ್ಟ ಹೆಂಡತಿಯನ್ನೂ, ಕೆಟ್ಟ ನದಿಯನ್ನೂ, ಕೆಟ್ಟ ಧನವನ್ನೂ, ಕೆಟ್ಟ ಭೋಜನವನ್ನೂ ವಿವೇಕಿಯಾದವನು ಬಿಟ್ಟುಬಿಡಬೇಕು.

ಯೋ ಧ್ರುವಾಣಿ ಪರಿತ್ಯಜ್ಯ
ಅಧ್ರುವಂ ಪರಿಷೇವತೇ
ಧ್ರುವಾಣಿ ತಸ್ಯ ನಶ್ಯಂತಿ
ಅಧ್ರುವಂ ನಷ್ಟಮೇವ ಚ ೩.

ಸ್ಥಿರವಾದುವುಗಳನ್ನು ಬಿಟ್ಟು ಅಸ್ಥಿರವಾದುವುಗಳನ್ನು ಅವಲಂಬಿಸುವವನಿಗೆ ಸ್ಥಿರವಾದುವು ಲಭಿಸಲಾರವು, ಅಸ್ಥಿರವಾದುವೂ ದಕ್ಕವು.

ಬೇಕಾದುವು—ಬೇಡದುವು



# ಮಾಯದ ಮೊಲ

ಕೆಲವು ನೂರು ವರ್ಷಗಳ ಹಿಂದೆ ಒಂದು ಜಮೀನುದಾರೀ ಗ್ರಾಮದಲ್ಲಿ, ಒಬ್ಬಳು ಮುದುಕಿಯೂ, ಅವಳ ಮೊಮ್ಮಗನೂ ವಾಸವಾಗಿದ್ದರು. ಅವರು ಕಡುಬಡತನದ ಬನ್ನವನ್ನು ಅನುಭವಿಸುತ್ತ, ಪಾವಲಿ ಒಂದು ಕಣ್ಣಿಗೆ ಬಿದ್ದರೆ ಮಹಾಭಾಗ್ಯವೆಂದು ಭಾವಿಸಿಕೊಳ್ಳುತ್ತಿದ್ದರು.

ಎಷ್ಟುದಿವಸ ಈ ಕಷ್ಟವೋ ಮುದುಕಿಗೆ ಅರ್ಥವಾಗಲಿಲ್ಲ. ಆ ಪರಿಸ್ಥಿತಿಯಲ್ಲಿ ಅವಳಿಗೆ ಒಂದು ಆಲೋಚನೆ ಬಂದಿತು. ಅವಳಿಗೆ ಒಂದೇ ಒಂದು ಮಂತ್ರವಿದ್ದ ಗೊತ್ತಿತ್ತು. ಆ ಮಂತ್ರದ ಸಹಾಯದಿಂದ ಅವಳು ಮೊಲವಾಗಿ ಬದಲಾಯಿಸಬಹುದಾಗಿತ್ತು. ಆದುದರಿಂದ ಈ ಮಂತ್ರದಿಂದ ನಾಲ್ಕು ಕಾಸು ಸಂಪಾದಿಸುವ ದಾರಿ ನೋಡಬಹುದಲ್ಲವೆ?

ಆ ಊರಿನ ಜಮೀನುದಾರನಿಗೆ ಬೇಟೆಯ ಮೇಲೆ ಬಹಳ ವ್ಯಾಮೋಹವಿತ್ತು. ಇಂತಹ ಸ್ಥಳದಲ್ಲಿ ಒಂದು ಮೊಲ ನೋಡಿದೆನೆಂದು ಯಾರಾದರೂ ಹೇಳಿದರೆ ಅವನಿಗೆ ಜಮೀನುದಾರನು ದುಡ್ಡು ಕೊಡುತ್ತಿದ್ದ. ಇದನ್ನು ತಿಳಿದಿರುವ ಮುದುಕಿ ದಾರಿದ್ರ್ಯದ ಪೀಡೆಯನ್ನು ತಾಳಲಾರದೆ, ಒಂದುದಿನ ತನ್ನ ಮೊಮ್ಮಗನ ಹತ್ತಿರ, "ಕಂದಾ, ನೀನು ಜಮೀನುದಾರನ ಬಳಿಗೆ ಹೋಗಿ ಹುಣಸೇ ತೋಪಿನ ಹತ್ತಿರ ಒಂದು ಮೊಲವನ್ನು ಕಂಡೆನೆಂದು ಹೇಳು. ಹಣ ಕೊಡುತ್ತಾನೆ, ತೆಗೆದುಕೊಂಡು ಬಾ. ನಾನು ನಿನ್ನ ಕಳುಹಿಸಿದ್ದೆಂದು ಯಾರಿಗೂ ಹೇಳಬಾರದಪ್ಪಾ. ಜಮೀನುದಾರ ನಮ್ಮನ್ನು ಕೊಂದು ಹಾಕಿಯಾನು!" ಎಂದಳು.

ಹುಡುಗ ಅಜ್ಜಿ ಹೇಳಿದಂತೆಯೇ ಹುಣಸೇ ತೋಪಿನ ಹತ್ತಿರ ಒಂದು ಮೊಲ ಇರುವುದನ್ನು ನೋಡಿದೆನೆಂದು ಜಮೀನುದಾರನ ಹತ್ತಿರ ಹೇಳಿದ. ಜಮೀನುದಾರ ಅವನ ಕೈಯಲ್ಲಿ ಒಂದು ಪಾವಲಿ ಹಾಕಿ ಬೇಟೆ ನಾಯಿಗಳನ್ನು ಕರೆದುಕೊಂಡು ಆ ಮೊಲವನ್ನು ಹಿಡಿಯಲು ಹೊರಟ.

ಹುಡುಗ ಹೇಳಿದಂತೆಯೇ ತೋಪಿನ ಹತ್ತಿರ ಒಂದು ಮೊಲ ಕಿವಿನಿಗುರಿ ಕುಳಿತಿರುವುದನ್ನು ಜಮೀನುದಾರ ನೋಡಿದ. ಆದರೆ ಬೇಟೆ ನಾಯಿಗಳು ಸಮೀಪಿಸುವುದರೊಳಗೆ, ಮೊಲ ತಪ್ಪಿಸಿಕೊಂಡು ಓಡಿ ಮುದುಕಿಯಾಗಿ ಹೋಯಿತು.

ಜಮೀನುದಾರನು ಆ ಪ್ರದೇಶದಲ್ಲೆಲ್ಲಾ ಮೊಲವನ್ನು ಗಾಳಿಸಿ ನೋಡಿ ಕಾಣದೆ ಮನೆಗೆ ಹಿಂದಿರುಗಿದ.

ಬಿ. ವೆಂಕಟಕೃಷ್ಣ

ಆಮೇಲೆ ಅನೇಕ ತಡವೆ ಮೊಮ್ಮಗ ಜಮೀನುದಾರನ ಬಳಿಗೆ ಹೋಗಿ ಇಂತಹ ಸ್ಥಳದಲ್ಲಿ ಮೊಲವಿದೆಯೆಂದು ಹೇಳಿ, ಜಮೀನುದಾರನಿಂದ ಪಾವಲಿಗಳನ್ನು ಗಿಟ್ಟಿಸಿಕೊಳ್ಳುವುದೂ, ಜಮೀನುದಾರ ಬೇಟೆಗೆ ಹೊರಡುವುದೂ, ಮೊಲವು ಅವನ ಕಣ್ಣಿಗೆ ಬಿದ್ದು ಮಾಯವಾಗುವುದೂ ಪರಿಪಾಟಿಯಾಯಿತು.

"ಏನೋ ಅಪ್ಪ, ಜಮೀನುದಾರ ಕೊಡುವ ಪಾವಲಿಯಿಂದ ನಮ್ಮ ದಿನ ಸ್ವಲ್ಪ ಒಳ್ಳೆಯದಾಗಿ ಹೋಗುತ್ತದೆ ನಿಜ. ಆದರೆ ಇದು ಬಹಳ ಅಪಾಯವಾದುದಪ್ಪಾ. ನಮ್ಮ ಗುಟ್ಟನ್ನು ಇನ್ನೊಂದು ನರಪಿಳ್ಳೆಗೆ ಕೂಡಾ ಹೇಳಿಬಿಡಬೇಡವೋ. ಇಷ್ಟರಲ್ಲೇ ಆತನಿಗೆ ಅನುಮಾನವಾಗಿದೆಯೋ ಏನೋ !" ಎಂದು ಅಜ್ಜಿ ಮೊಮ್ಮಗನೊಂದಿಗೆ ಹೇಳಿದಳು.

ಮುದುಕಿ ಹೆದರಿದ್ದು ಸುಳ್ಳಾಗಲಿಲ್ಲ. ಜಮೀನುದಾರನಿಗೆ ಅನುಮಾನವಾಗಿಯೇ ಆಯಿತು. ಪ್ರತಿ ಸಾರಿಯೂ ಮೊಲ ಬೇಟೆ ನಾಯಿಗಳಿಗೆ ಸಿಗುವುದಿಲ್ಲವೆಂದರೇನು ? ಮೊಲದ ಮಾಯದಲ್ಲಿ ಏನೋ ಮೋಸವಿರಬೇಕು.

ಹೀಗೆಂದುಕೊಂಡು ಅವನು, ಹುಡುಗ ಮೊಲದ ವಾರ್ತೆ ಹೇಳಿದ ತತ್‌ಕ್ಷಣವೇ ತನ್ನ ಬೇಟೆ ನಾಯಿಗಳೊಂದಿಗೆ ಹೊರಟು ಅವುಗಳನ್ನು ಮುಂದಾಗಿ ಓಡಿಸಿದ. ಮೊಲಕ್ಕೆ ಮನುಷ್ಯನು ಕಾಣಿಸುವುದಕ್ಕಿಂತ ಮೊದಲೇ ಬೇಟೆ ನಾಯಿಗಳು ಅದರ ಮೇಲೆ ಹಾರಿದುವು. ಮೊಲ ತನ್ನ ಬಲವೆಲ್ಲಾ ಉಪಯೋಗಿಸಿ ಓಡಿತು. ಆ ಮೊಲವನ್ನು ಬೇಟೆ ನಾಯಿಗಳು ಮುದುಕಿಯ ಗುಡಿಸಲಿನವರೆಗೂ ಓಡಿಸಿಕೊಂಡು ಹೋದುವು. ಚಿಕ್ಕದೊಂದು ಬಿಲದ ಮೂಲಕ ಮೊಲ ಗುಡಿಸಲಿನೊಳಗೆ ತೂರಿತು. ಬೇಟೆ ನಾಯಿಗಳು ಹೊರಗೆ ನಿಂತು ಬೊಗಳುತ್ತಿದ್ದುವು.

ಜಮೀನುದಾರನು ಬಂದು ಬಾಗಿಲು ತಟ್ಟಿದ. ಬಾಗಿಲು ತೆರೆದ ಮುದುಕಿ ಆಯಾಸದಿಂದ ನಡುಗುತ್ತ ಏದುಸಿರು ಬಿಡುತ್ತಿದ್ದಳು.

ಜಮೀನುದಾರ ಕೋಪದಿಂದ, "ನೀನೇ ಏನು ಮೊಲ ? ಏನು ನಿನ್ನ ಎತ್ತುಗಡೆ ?" ಎಂದು ಕೇಳಿದ.

ಮುದುಕಿ ಅಳುಗೊರಲಿನಿಂದ ಅವನೊಂದಿಗೆ ತನ್ನ ಬಡತನದ ಬಾಧೆಯನ್ನು ಹೇಳಿಕೊಂಡು, ತಾನೂ ತನ್ನ ಮೊಮ್ಮಗನೂ ಬದುಕಲಿಕ್ಕಾಗಿ, ತನಗೆ ತಿಳಿದ ಮಂತ್ರದ ಹೊರತು ಬೇರೆ ದಾರಿ ಕಾಣದೆ ಹೋಯಿತೆಂದೂ ತನ್ನನ್ನು ಕ್ಷಮಿಸಬೇಕೆಂದೂ ಕೇಳಿಕೊಂಡಳು.

ಮುದುಕಿ ಆ ವಯಸ್ಸಿನಲ್ಲಿ ಮೊಮ್ಮಗನ ಪ್ರೀತಿಗಾಗಿ ಪಡುತ್ತಿರುವ ಸಂಕಟವನ್ನು ನೋಡಿ ಜಮೀನುದಾರನು ಕನಿಕರಗೊಂಡು, ಮುದುಕಿಗೆ ಸಮಾಧಾನ ಮಾಡಿದ. ಆಮೇಲೆ ಮುದುಕಿ ಮೊಮ್ಮಗನೊಂದಿಗೆ ನಿಶ್ಚಿಂತೆಯಾಗಿದ್ದಳು.





# ಅದೃಶ್ಯಕರಣಿ

ಹಳ ವರ್ಷಗಳ ಹಿಂದೆ ಒಂದಾನೊಂದು ಗ್ರಾಮ ಬಹಳ ನೀಚನಾದ ಭೂಮಾಲೀಕನೊಬ್ಬನಿದ್ದ. ಬೇಡುವವರಾರೂ ಅವನ ಮನೆಯ ನೆರಳಿಗೆ ಹೋಗಲು ಸಾಧ್ಯವಿಲ್ಲ. ಅಪ್ಪಿತಪ್ಪಿ ಭಿಕ್ಷುಕರ ಕೇಳಿಸಿದರೆ ಅವರನ್ನು ಬೈದು ಅಟ್ಟುವುದು ಮಾತ್ರವಲ್ಲ, ಅವರು ಮತ್ತೆ ಎಂದಿಗೂ ಬಾರದಂತೆ ಯಿಗಳನ್ನು ಅವರ ಮೇಲೆ ಛೂಬಿಡುತ್ತಿದ್ದ. ಎಲ್ಲಾ ಕರಿಗೂ ಅವನದೊಂದು ನೆನಪಿನ ಮನೆ.

ಒಂದುಸಾರಿ ಆ ಪ್ರಾಂತದೊಳಗೆಲ್ಲಾ ತೀವ್ರವಾದ ಬಂತು. ಎಲ್ಲಿ ನೋಡಿದರೂ ತಿಂಡಿ ತಿಂಡಿ, ಹಸಿವೇ ಎಂಬ ಕೂಗೇ. ಇಂತಹ ಬರಗಾಲ ಗ್ರಾಮಸ್ಥರು ಎಂದೂ ಕಂಡಿರಲಿಲ್ಲ. ಹೊಟ್ಟೆ ಉಣ್ಣುವುದೆಂದರೆ ಏನೆಂಬುದನ್ನೇ ಮರೆ ಈ ಭೂಮಾಲೀಕನ ಮನೆಯಲ್ಲಿ ತುಂಬಾ ಸಂಗ್ರಹವಿದೆ ಎಂಬ ಸಂಗತಿ ಅನೇಕರಿಗೆ ತ್ತು. ಆದರೆ ಜನರು ಎಷ್ಟು ಬೇಡಿದರೂ ರ್ಲೋಟಿಕನ ಮನಸ್ಸು ಕರಗುತ್ತಿರಲಿಲ್ಲ.

ಪರಿಸ್ಥಿತಿಯಲ್ಲಿ ಒಬ್ಬ ಯುವಕನು ಆ ಮಾಲೀಕನ ಮನಸ್ಸನ್ನು ಕರಗಿಸಿ ಧಾನ್ಯವನ್ನು ತರುವೆನೆಂದು ಹೊರಟ. ಅವನು ಭೂಮಾಲೀಕನ ಮನೆಯ ಮುಂದಿನ ತೋಟದೊಳಗೆ ಪ್ರವೇಶಿಸಿ, ಒಂದು ಎತ್ತರವಾದ ಮರದ ಕೆಳಗೆ ಕುಳಿತು ಕೊಂಬೆಯ ಕಡೆಗೆ ಒಂದೇಸವನೆ ನೋಡತೊಡಗಿದ.

ಭೂಮಾಲೀಕನು ಆಗಲೇ ಊಟ ತೀರಿಸಿ, ಬಾಯಿ ಒರೆಸಿಕೊಳ್ಳುತ್ತಾ, ಕಿಟಕಿಯ ಬಳಿಗೆ ಬಂದು, ಹೊರಗೆ ನೋಡಿದಾಗ, ತೋಟದಲ್ಲಿ ಮೇಲೆ ನೋಡುತ್ತಾ ಕುಳಿತಿರುವ ಯುವಕ ಕಾಣಿಸಿದ. ಅವನೇನೋ ದುರ್ಬುದ್ಧಿಯಿಂದ ನೋಡುತ್ತಿದ್ದಾನೆಂದುಕೊಂಡು ಭೂಮಾಲೀಕ, "ಯಾರೆಲೋ ಅದು ? ಏನು ಮಾಡುತ್ತೀಯೋ ಅಲ್ಲಿ ?" ಎಂದು ಕೂಗಿ ಕೇಳಿದ.

ಯುವಕನು ಆ ಕೂಗು ಕೇಳದವನಂತೆ ಹಾಗೆಯೇ ನೋಡುತ್ತಾ ಸುಮ್ಮನೆ ಕುಳಿತಿದ್ದಾನೆ.

ಭೂಮಾಲೀಕ ಹೊರಗೆ ನಡೆದು ಯುವಕನನ್ನು ಸಮೀಪಿಸುತ್ತ, "ಏಕೆ ಹಾಗೆ ನೋಡುತ್ತಿರುವಿ ಯೆಂದು ಕೇಳಿದರೆ ಮಾತಾಡುವುದಿಲ್ಲವೇಕೋ ? ಕಿವುಡೇನೋ ?" ಎಂದು ಕೇಳಿದ.

"ಮತ್ತೇನಿಲ್ಲ. ಗೂಡಿಗಾಗಿ ನೋಡುತ್ತಿದ್ದೇನೆ. ನಿನ್ನೆ ಅಗ್ನಿ ಪಕ್ಷಿ ಈ ಮರದ ಮೇಲೆ ಎರಗುವುದನ್ನು

ಚೀನಾ ಜಾನಪದ ಕಥೆ

ನೋಡಿದೆ. ಇಲ್ಲಿ ಆ ಪಕ್ಷಿ ಗೂಡುಕಟ್ಟಿದರೆ, ಏನು ಹೇಳಲಿ ನನ್ನ ಭಾಗ್ಯವನ್ನು !" ಎಂದು ಮತ್ತೆ ನೋಡ ತೊಡಗಿದ ಯುವಕ.

"ಏನೋ ನಿನ್ನ ಭಾಗ್ಯ ?" ಎಂದು ಭೂಮಾಲೀಕ ಕೇಳಲು, "ಆ ಪಕ್ಷಿಯ ಗೂಡಿನಲ್ಲಿ ಮಂತ್ರದ ಮೂಲಿಕೆಯೊಂದಿರುತ್ತದೆ. ಈ ಸಂಗತಿ ನಿಮಗೂ ಗೊತ್ತಿದ್ದೀತಲ್ಲ ? ಅದೋ ಗೂಡು !" ಎಂದು ಯುವಕ ಹಾರಿ ನಿಂತ.

"ಮಂತ್ರದ ಮೂಲಿಕೆಯೇ ? ಎಂತಹ ಮಂತ್ರವದು ?" ಎಂದು ಕೇಳಿದ ಭೂಮಾಲೀಕ.

"ಅದೊಂದು ಅಪೂರ್ವ ಮೂಲಿಕೆ. ಸಾವಿರ ವರ್ಷಕ್ಕೊಮ್ಮೆ ಹೂ ಬಿಡುವಂಥಾದ್ದು. ಆ ಹೂವು ಕಾಯಾಗಲು ಮತ್ತೊಂದು ಸಾವಿರ ವರ್ಷವಾಗುತ್ತೆ. ಆದರೆ ಅದರ ಚಿಕ್ಕ ರೆಂಬೆಯಲ್ಲಿ ಕೂಡಾ ಅದ್ಭುತ ಶಕ್ತಿಯಿರುತ್ತದೆ. ಅಗ್ನಿಪಕ್ಷಿ ತನ್ನ ಗೂಡಿಗೆ ಅದರ ಚೂರು ತಂದೇ ತರುತ್ತದೆ" ಎಂದ ಯುವಕ. "ಆ ಮೂಲಿಕೆಗಿರುವ ಅದ್ಭುತ ಶಕ್ತಿ ಎಂಥವೆಂಬುದನ್ನು ಹೇಳುವುದಿಲ್ಲವಲ್ಲಾ ನೀನು ? ಏನಾಗುತ್ತದೆ ರಿಂದ ?" ಎಂದ ಭೂಮಾಲೀಕ ಸ್ಥೈರಣೆಗೆಟ್ಟು.

"ಒಂದು ಶಕ್ತಿ ಏನಂದರೆ, ಅದರ ಚಿಕ್ಕಂದೊ ಚೂರನ್ನು ತಲೆಯ ಮೇಲಿಟ್ಟು ಕೊಂಡರೆ, ಪೂ ಅದೃಶ್ಯರಾಗಿ ಬಿಡುತ್ತೇವೆ. ನಾವು ಯಾರಿಗೂ ಸುವುದಿಲ್ಲ. ಆಗ ನಾವು ಏನುಮಾಡಿದರೂ ಕೇಳ ರಿಲ್ಲ. ಇನ್ನೊಂದೇನಂದರೆ..."

ಯುವಕನು ಮಾತು ಮುಗಿಸುವುದರೊ ಭೂಮಾಲೀಕ "ಮೊದಲು ಇಲ್ಲಿಂದ ಹೊ ಹೋಗು !" ಎಂದು ಕೂಗಿ ಕಣ್ಣು ಕೆಕ್ಕರಿಸಿದ.

ಯುವಕನು ಸುತ್ತಲೂ ನೋಡಿ, "ಇಲ್ಲಿ ಯಾ ಬರಲಿಲ್ಲವಲ್ಲಾ ! ಯಾರ ಮೇಲೆ ಕೋಪಿಸುವಿ !" ಎಂದು ಕೇಳಿದ.

"ನಿನ್ನನ್ನೇ ಹೋಗನ್ನುವುದು, ನಡೆ ಇಲ್ಲಿಂದ. ಮೂಲಿಕೆ ನನ್ನದು. ಈ ತೋಟ ನನ್ನದು.!" ಎಂ ಭೂಮಾಲೀಕ ಕಣ್ಣಗಲಿಸಿ ಇನ್ನಷ್ಟು ಗಟ್ಟಿಯಾಗಿ ಚಿದ. "ಹಾಗೇನು ? ಅದನ್ನು ಕಂಡು ಹಿಡಿದ



ನನು. ಅದನ್ನು ಉಳಿಸುವುದೂ ಧ್ವಂಸ ಮಾಡು ವುದೂ ನನ್ನ ಕೈಯೊಳಗಿದೆ" ಎಂದು ಹೇಳಿ ಯುವ ಕನು ಮರದ ಮೇಲೆ ಏರಲಾರಂಭಿಸಿದ.

"ನಿಲ್ಲು. ಒಂದುಕ್ಷಣ ತಾಳು. ನಿನಗೆ ಐವತ್ತು ಚಿನ್ನದ ನಾಣ್ಯಗಳನ್ನು ಕೊಡುತ್ತೇನೆ" ಎಂದ ಭೂಮಾಲೀಕ.

"ಕ್ಷಮಿಸಬೇಕು, ಅದನ್ನು ಅಷ್ಟು ಅಗ್ಗದಲ್ಲಿ ಮಾರ ಲಾರೆ" ಎಂದ ಯುವಕ.

ಭೂಮಾಲೀಕ ಚೌಕಾಸಿ ಮಾಡಲು ಶುರುಮಾಡಿದ.

"ನನಗೆ ಹಣದ ಅಗತ್ಯವಿಲ್ಲ. ಐವತ್ತು ಚೀಲಗಳ ತುಂಬ ಧಾನ್ಯ ಕೊಡುವುದಾದರೆ ಆ ಮೂಲಿಕೆಯನ್ನು ನಿಮಗೇ ಬಿಟ್ಟುಬಿಡುತ್ತೇನೆ" ಎಂದ ಯುವಕ.

ಏನೋ ಬಲವಂತದಿಂದ ಒಪ್ಪಿಕೊಂಡಂತೆ ಭೂ ಮಾಲೀಕ ಯುವಕ ಹೇಳಿದುದಕ್ಕೆ ಒಪ್ಪಿದ. ಅವನು ತುಂಬಿಸಿಕೊಟ್ಟ ಧಾನ್ಯದ ಮೂಟೆಗಳನ್ನು ಆ ಯುವ ಕನು ಹೊತ್ತುಕೊಂಡು ಹೋಗಿ ಗ್ರಾಮಗಳಲ್ಲಿರುವ ಬಡಬಗ್ಗರಿಗೆಲ್ಲಾ ಹಂಚಿ ಕೊಟ್ಟು ಹಗುರಾಗಿ ಹೋದ. ಇಲ್ಲಿ ಭೂಮಾಲೀಕ ತನ್ನ ಸೇವಕರಿಂದ ಮರದ ಮೇಲಿದ್ದ ಒಂದು ಗೂಡನ್ನು ಕೆಳಕ್ಕೆ ಇಳಿಸಿ, ಅದನ್ನು ಎತ್ತಿಕೊಂಡು ತನ್ನ ಹೆಂಡತಿಯ ಮುಂದೆ ನಿಂತು. "ಏನು ನಡೆಯಿತು, ಹೇಳು ನೋಡುವಾ!" ಎಂದ ಸಂತೋಷದಿಂದ ಉಬ್ಬುತ್ತಾ.

"ನನಗೇನು ಗೊತ್ತು ? ಯಾರ ತಲೇಮೇಲೆಯೊ ಕೈಯಿಟ್ಟು ಬಂದಿದ್ದೀರಿ" ಎಂದಳು ಹೆಂಡತಿ.

"ನಿನ್ನಿಂದ ಕಂಡುಹಿಡಿಯಲು ಸಾಧ್ಯವಿಲ್ಲ ಬಿಡು. ಒಂದು ಮಂತ್ರದ ಮೂಲಿಕೆ ಸಂಪಾದಿಸಿದ್ದೇನೆ. ಅದ ರಿಂದ ನಾವು ಅಂತ್ಯವಿಲ್ಲದಷ್ಟು ಹಣ ಸಂಪಾದಿಸ ಬಹುದು" ಎಂದ ಭೂಮಾಲೀಕ.

ಅವನ ಹೆಂಡತಿ ಗೂಡಿನ ಕಡೆಗೆ ಅನುಮಾನದಿಂದ ನೋಡಿ, "ಇದೇ ಏನು ಮಂತ್ರದ ಮೂಲಿಕೆ ?"- ಎಂದಳು. ಅದರ ತುಂಬಾ ಕಡ್ಡಿಗಳೂ, ಒಣ ಹುಲ್ಲು ಗಳೂ ಇದ್ದುವು.

"ಈ ಕಡ್ಡಿ ಹುಲ್ಲುಗಳಲ್ಲಿ ಮಂತ್ರದ ಮೂಲಿಕೆ ಯಾವುದೆಂದು ನಾವು ಕಂಡುಹಿಡಿಯಬೇಕು. ನಾನು ಒಂದೊಂದೇ ತೆಗೆದು ತಲೆಯ ಮೇಲೆ ಇಟ್ಟು



ಕೊಳ್ಳುತ್ತೇನೆ. ಯಾವುದನ್ನು ಇಟ್ಟಾಗ ನಾನು ಕಾಣಿಸದೆ ಹೋಗುತ್ತೇನೆ ಅಂತ ನೀನು ಹೇಳಬೇಕು" ಎಂದ ಭೂಮಾಲೀಕ.

ಅವನು ಒಂದೊಂದೇ ಕಡ್ಡಿ, ಹುಲ್ಲು, ಚೂರುಗಳನ್ನು ಆರಿಸಿ ಆರಿಸಿ ತಲೆಯಮೇಲಿಟ್ಟು ಕೊಳ್ಳುವುದೂ "ನಾನು ಕಾಣುತ್ತೇನೆಯೆ ?" ಎಂದು ಕೇಳುವುದೂ, ಅವನ ಹೆಂಡತಿ "ಆಹಾ ! ಕಾಣಿಸುತ್ತಾ ಇದ್ದೀರಿ" ಎನ್ನುವುದೂ ಅನೇಕಸಾರಿ ನಡೆದುವು.

ಕೊನೆಗೆ ಹೆಂಡತಿ ಬೇಸತ್ತು, "ಹುಂ, ನನಗೇನೂ ಕಾಣಿಸುವುದಿಲ್ಲ ಹೋಗಿ !" ಎಂದು ಎದ್ದು ಹೊರಟು ಹೋಗಿಬಿಟ್ಟಳು. ಆಗ ತನ್ನ ತಲೆಯಲ್ಲಿರುವುದೇ ಮಂತ್ರದ ಮೂಲಿಕೆ ಎಂದುಕೊಂಡು, ಅದು ಬಿದ್ದು ಹೋಗದಂತೆ ತಲೆಯಲ್ಲಿ ಗಟ್ಟಿಯಾಗಿ ತುರುಕಿಸಿಕೊಂಡು, ಆ ಮೂಢ ನಗರಕ್ಕೆ ಹೊರಟ.

ಬೀದಿಯಲ್ಲಿ ನಡೆಯುತ್ತಿರುವಾಗ ಅವನ ಮೂಗಿಗೆ ಗಮಗಮನೆ ತಿಂಡಿಗಳ ಸುವಾಸನೆ ಹೊಡೆಯಿತು. ತನ್ನ ಹೊಟ್ಟೆಯಲ್ಲಿ ಬಹಳ ಹಸಿವೆಯಾಗುತ್ತಿರಬೇಕೆಂದುಕೊಂಡು, ಸಮೀಪದಲ್ಲಿದ್ದ ಭಕ್ಷ್ಯಗಳ ಅಂಗಡಿಯಿಂದ ದೋಸೆಗಳನ್ನು ತೆಗೆದು ಗಬಗಬನೆ ತಿಂದು, ಮಿಠಾಯಿಗಳನ್ನೂ ತೆಗೆದು ತಿನ್ನುತ್ತಾ ಮುಂದೆ ಸಾಗಿಬಿಟ್ಟ. ಭಕ್ಷ್ಯದಂಗಡಿಯವನು ಅವನ ಪರಿಚಿತನೇ. ಭೂಮಾಲೀಕ ಏನೋ ಅವಸರ ಕೆಲಸದ ಮೇಲೆ ಹೊರಟಿರಬೇಕೆಂದೂ, ಹಣ ಕೊಡಲು ಮರೆತಿರಬೇಕೆಂದೂ, ಹಿಂದಿರುಗುವಾಗ ಕೊಡುವನೆಂದೂ ಅಂಗಡಿಯವ ಮಾತಾಡದೆ ಸುಮ್ಮನಿದ್ದ.

ತಾನು ಅದೃಶ್ಯನಾಗಿರುವ ಕಾರಣದಿಂದಲೇ ಅಂಗಡಿಯವ ಹಣ ಕೇಳಲಿಲ್ಲವೆಂದು ಭೂಮಾಲೀಕ ತಿಳಿದುಕೊಂಡ. ಆದರಿಂದ ಅವನಿಗೆ ಇನ್ನಷ್ಟು ಧೈರ್ಯ ಬಂದಿತು.

ಮತ್ತೊಂದು ಅಂಗಡಿಯಲ್ಲಿದ್ದ ವರ್ತಕನು ಅಂಗಡಿಯನ್ನು ಮುಚ್ಚುವ ಮೊದಲು ಆ ದಿನ ವ್ಯಾಪಾರವಾದ ಹಣವನ್ನೆಲ್ಲಾ ಮುಂದೆ ರಾಶಿ ಹಾಕಿ, ಎಣಿಸಿ ಅಡಕಲು ಮಾಡಿಕೊಂಡಿದ್ದ. ಆ ಹಣವನ್ನು ನೋಡಿದಾಗ ಭೂಮಾಲೀಕನಿಗೆ ಕಣ್ಣುಗಳು ತಿರುಗಿದುವು. ಅವನು ಧೈರ್ಯದಿಂದ ಹತ್ತಿರ ಹೋಗಿ ಕೈತೂರಿಸಿ ಹಣವನ್ನೆಲ್ಲಾ ಬಾಚಲು ಪ್ರಯತ್ನಿಸಿದ.

ಕೂಡಲೇ ವರ್ತಕನು ಭೂಮಾಲೀಕನ ಕೈಗಳನ್ನು ಬಿಗಿಯಾಗಿ ಹಿಡಿದು, "ಕಳ್ಳ ! ಕಳ್ಳ !" ಎಂದು ಕೂಗಿದ. ಎಲ್ಲಾ ಕಡೆಗಳಿಂದಲೂ ಜನರು ಬಂದು ಮುಗಿಬಿದ್ದು ಭೂಮಾಲೀಕನನ್ನು ಹೊಡೆದು ಚಚ್ಚಿ ಹಣ್ಣುಗಾಯಿ ನೀರುಗಾಯಿ ಮಾಡಿದರು.

ಹೇಗೋ ಅಲ್ಲಿಂದ ಜೀವ ಹಿಡಿದುಕೊಂಡು ಬೀಳುತ್ತಾ ಏಳುತ್ತಾ ತನ್ನ ಮನೆ ಸೇರಿ, ಹಾ ಎಂದು ಮಂಚದಲ್ಲಿ, ಬಿದ್ದ ಭೂಮಾಲೀಕ.





# ಶಿಲಾರಥ

## ೧೯

[ ಖಡ್ಗವರ್ಮ ಜೀವದತ್ತರು ವಿಘ್ನೇಶ್ವರ ಪೂಜಾರಿ ಹಾಗು ಸ್ವರ್ಣಾಚಾರಿಗಳನ್ನು ಕರೆದು ಕೊಂಡು ಪ್ರಯಾಣಿಸುತ್ತಿದ್ದಾಗ, ಕಾಡಿನಲ್ಲಿ ಒಬ್ಬ ಹುಲಿಯ ಬಾಯಿಗೆ ಬಿದ್ದು ಸಾಯುವ ಹಂಚಿಕೆ ಯಲ್ಲಿರುವುದನ್ನು ನೋಡಿದರು. ಖಡ್ಗವರ್ಮಾದಿಗಳು ಅವನ ಬಳಿಗೆ ಹೋಗಿ ವಿಚಾರಿಸುತ್ತಿದ್ದಾಗ, ಖಡ್ಗಮೃಗದ ಮೇಲೆ ಕುಳಿತಿದ್ದ ಒಬ್ಬನು ಥಕ್ಕನೆ ಬಂದು, ಇವರನ್ನು ಮುತ್ತಿದ—]

ಖಡ್ಗಮೃಗದ ಮೇಲೆ ಏರಿಬಂದ ಆ ಹೊಸ ಮನುಷ್ಯ ತನ್ನ ಅನುಚರರ ಕಡೆಗೆ ನೋಡಿ, ಇವರನ್ನು ಹಿಡಿಯಿರೆಂದು ಕರ್ಕಶವಾಗಿ ಕೂಗಿ ಆಜ್ಞೆ ಮಾಡಿದುದನ್ನು ಕೇಳಿ, ಖಡ್ಗವರ್ಮ ಜೀವದತ್ತರು, ಪುನಃ ಏನೋ ಅಪಾಯದಲ್ಲಿ ಬಿದ್ದೆವೆಂದುಕೊಂಡರು. ಆದರೆ ಜೀವದತ್ತನು ಸುಮ್ಮನಿರದೆ, ಮಿಂಚಿನ ವೇಗದಲ್ಲಿ ಮುಂದಕ್ಕೆ ಹಾರಿ, ತನ್ನ ಕೈಯಲ್ಲಿದ್ದ ಅದ್ಭುತ ಶಕ್ತಿಯ ದಂಡಾಯುಧದಿಂದ ಖಡ್ಗಮೃಗಾರೂಢನ ತಲೆಯ ಮೇಲೆ ಒಂದೇಟು ಕೊಟ್ಟನು. ಅದು ಮಿಂಚಿನ ಹೊಡೆತದಂತಾಗಿ ಅವನು "ಹಾ! ಅರಣ್ಯಮಾತಾ!" ಎಂದು ಅರಚುತ್ತ ನೆಲಕ್ಕೆ ಬಿದ್ದ. ಅವನು ಥಕ್ಕನೆ ಬಿದ್ದುದನ್ನು ನೋಡಿ ಉಳಿದ ಅವನ ಕಡೆಯವರು ಅಲ್ಲಲ್ಲೇ ನಿಂತರು.

"ಎಲವೋ, ಅರಣ್ಯಮಾತೆಯ ಮಕ್ಕಳೇ! ನಿಮ್ಮ ನಿಮ್ಮ ಆಯುಧಗಳನ್ನು ಕೆಳಗೆ ಹಾಕಿ ಶರಣಾಗಿ ಬಿಡಿರಿ. ಇಲ್ಲದಿದ್ದರೆ ನಿಮಗೆಲ್ಲಾ ಒಂದೇಸಾರಿ ಸಾವು ನಿಶ್ಚಯ! ನಿಮ್ಮ ನಾಯಕನಿಗಾದ ಗತಿ ನೋಡಿದಿರಷ್ಟೆ?" ಎಂದು ಜೀವದತ್ತ ಗಂಭೀರ ಧ್ವನಿಯಿಂದ, ಅರಣ್ಯವೇ ಪ್ರತಿಧ್ವನಿಗೊಡುವಂತೆ ಕೂಗಿ ಹೇಳಿದನು.




"ಇನ್ನೂ ಅಡಗಿ ಹೊಂಚು ಹಾಕುವವರೆಲ್ಲ ಬೇಗ ಮುಂದೆ ಬನ್ನಿ! ಇಲ್ಲದಿದ್ದರೆ ಸಾಕಿದ ಹುಲಿಯನ್ನು ನಿಮ್ಮ ಮೇಲೆ ಹಾರಿಸಿಬಿಡುತ್ತೇನೆ. ಅದು ನಿಮ್ಮನ್ನು ಹುಡುಕಿ ಹುಡುಕಿ ಹರಿದು ಹಾಕುವಂಥಾದ್ದು! ಎಚ್ಚರ!" ಎಂದು ಖಡ್ಗ ವರ್ಮನೂ ಹೆದರಿಸಿದ.

ಕೂಡಲೇ ನಾಲ್ಕು ಮಂದಿ ಅಡವಿ ಮನುಷ್ಯರು ಆಯುಧಗಳನ್ನು ಕೆಳಗೆ ಹಾಕಿ, ಬರಿಗೈಗಳನ್ನು ಮೇಲೆ ಎತ್ತಿಕೊಂಡು ಮರಗಳ ಮರೆಯಿಂದ ಮುಂದಕ್ಕೆ ಬಂದರು. ಅವರು ಕೆಳಗೆ ಹಾಕಿದ ಆಯುಧಗಳು ಕಲ್ಲಿನ ಆಯುಧಗಳೇ.

ಅವರು ನೋಡಲು ಭಯಂಕರ ರೂಪಿಗಳಾಗಿದ್ದರೂ ಬೇಗನೇ ಹೆದರುವವರೆಂದು ಗೊತ್ತಾಯಿತು. ಅಂತೆಯೇ ಜೀವದತ್ತನು ಖಡ್ಗ ವರ್ಮನೊಂದಿಗೆ, "ಇವರು ಅಡವಿ ಜಾತಿಯವರಲ್ಲೇ ತುಂಬಾ ಹಿಂದುಳಿದವರಂತಿದೆ. ಇಂಥವರು ಇನ್ನೆಷ್ಟು ಮಂದಿ ಇದ್ದಾರೋ? ಒಟ್ಟಿನ ಮೇಲೆ ಇಲ್ಲಿ ಹುಲಿಯ ಬಾಯಿಗೆಬಿದ್ದು ಸಾಯಲು ನಿಂತವನು ನಮಗೆ ಮತ್ತೊಂದು ಹೊಸ ಸಮಸ್ಯೆಯನ್ನು ತಂದು ಹಾಕಿದ" ಎಂದನು.

ಆಗ ಆ ಯುವಕ ಜೀವದತ್ತನಿಗೆ ಕೈಮುಗಿದು, "ಅಯ್ಯಾ, ನನ್ನನ್ನು ಸಹಾ ನಿಮ್ಮೊಂದಿಗೆ ಕರೆದೊಯ್ಯಿರಿ. ಹುಲಿಯ ಬಾಯಿಯಿಂದ ಉಳಿಸಿ ನನ್ನನ್ನು ಅರಣ್ಯಪುರದ ಗಣಾಚಾರಿಗೆ ಆಹುತಿ ಕೊಡಬೇಡಿ. ಅವನು ನನ್ನನ್ನು ಚಿತ್ರಹಿಂಸೆ ಮಾಡಿ ಕೊಲ್ಲಬೇಕೆಂದಿದ್ದಾನಂತೆ" ಎಂದ ಅಳುಗೊರಲಿನಿಂದ.

ಅಷ್ಟರಲ್ಲಿ, ಅದುವರೆಗೂ ಮರದ ಮೇಲೇರಿ ಅಡಗಿಕೊಂಡಿದ್ದ ಸ್ವರ್ಣಾಚಾರಿಯೂ ವಿಘ್ನೇಶ್ವರ ಪೂಜಾರಿಯೂ ಧೈರ್ಯದಿಂದ ಇಳಿದು ಬಂದು ಅವರ ಮುಂದೆ ಕಾಣಿಸಿದರು.

"ಎಲ! ನೀವಿಬ್ಬರೂ ಇನ್ನೂ ಬದುಕಿರುವಿರಾ? ಇಷ್ಟು ಹೊತ್ತು ಎಲ್ಲಿದ್ದಿರಿ?" ಎಂದು ಖಡ್ಗವರ್ಮ ತಿರಸ್ಕಾರದಿಂದ ಕೇಳಿದ.

"ನಾವು ಮರದ ಮೇಲಿದ್ದು ನಿಮ್ಮಿಬ್ಬರ ಶೌರ್ಯ ಪ್ರತಾಪಗಳನ್ನು ನೋಡುತ್ತಿದ್ದೆವು! ನಿಶ್ಚಯವಾಗಿ ದೇವರು ನಿಮಗೆ ಒಳ್ಳೇದು ಮಾಡುತ್ತಾನೆ" ಎಂದ ವಿಘ್ನೇಶ್ವರ ಪೂಜಾರಿ.

"ಅಲ್ಲೇ ಕುಳಿತು ನೋಡುವುದನ್ನು ಬಿಟ್ಟು ಇಳಿದು ಬಂದಿರೇಕೆ? ಜೀವಾ, ನಾವಿನ್ನು ಈ ಕೆಲಸಕ್ಕೆ ಬಾರದವರನ್ನೆಲ್ಲಾ ಬಿಟ್ಟುಕೊಟ್ಟು ನಮ್ಮ ಪಾಡಿಗೆ ಹೋಗಿಬಿಡೋಣ. ಅವರಪಾಡು ಅವರೇ ನೋಡಿಕೊಳ್ಳಲಿ" ಎಂದ ಖಡ್ಗವರ್ಮ.

"ಅವಸರಪಡಬೇಡಪ್ಪಾ ಖಡ್ಗಾ. ಇವರನ್ನು ಇಷ್ಟು ಸುಲಭದಲ್ಲಿ ಬಿಡುವಂತೆ ಕಾಣುವುದಿಲ್ಲ ಪರಿಸ್ಥಿತಿ" ಎಂದು ನುಡಿದು ಜೀವದತ್ತನು, ಹುಲಿಯ ಬಾಯಿಗೆ ಬೀಳುವೆನೆಂದಿದ್ದ ಯುವಕನನ್ನು ಕುರಿತು, "ನಿನ್ನ ಹೆಸರೇನಪ್ಪಾ? ಸದ್ಯ ನಿನಗೆ ಬಂದ ಆಪತ್ತು,

ತಷ್ಟೆ ? ಇನ್ನು ಯಾವುದೋ ಅರಣ್ಯಪುರದ ಗಣಾಚಾರಿಗೆ ಸಿಕ್ಕದ ಹಾಗೆ ಎಲ್ಲಾದರೂ ಹೋಗಿ ಬದುಕಲಾರೆಯಾ ? ಗಣಾಚಾರಿ ಯಾರವನು ? ಗಾಳಿಯಂತೆ ಸರ್ವ ವ್ಯಾಪಿಯೆ ?" ಎಂದು ಕೇಳಿದ.

"ನನ್ನ ಪಾಲಿಗೆ ಹಾಗೆಯೇ ಸರಿ. ಅವನಿಂದ ತಪ್ಪಿ ಬದುಕಲು ನನಗೆ ಸಾಧ್ಯವಾಗದು. ಕೇಳಿ. ನನ್ನ ಹೆಸರು ಅರಣ್ಯಮಲ್ಲ. ಗಣಾಚಾರಿಗೆ ಗೊತ್ತಾಗದ ಹಾಗೆ ಈ ಅರಣ್ಯದೊಳಗೆ ಎಲ್ಲಿ ಬದುಕಿರಲಿಕ್ಕೂ ಸಾಧ್ಯವಿಲ್ಲ. ಅರಣ್ಯ ಬಿಟ್ಟರೆ ಬೇರೆ ಗತಿಯೂ ಇಲ್ಲ. ಆದ್ದರಿಂದ ನನ್ನನ್ನು ನಿಮ್ಮ ಜತೆ ಇಟ್ಟುಕೊಳ್ಳಿ. ಅವನು ಮೋಸದಿಂದ ನನ್ನ ಸಿಂಹಾಸನವನ್ನು ಆಕ್ರಮಿಸಿಕೊಂಡ" ಎಂದ ಯುವಕ.

"ಸರಿ. ಹತ್ತರೊಟ್ಟಿಗೆ ಹನ್ನೊಂದರ ಹಾಗೆ ನಿನ್ನ ಸಮಸ್ಯೆಯನ್ನೂ ಪರಿಷ್ಕಾರ ಮಾಡಿ ಹೋಗುತ್ತೇವೆ. ಆ ಗಣಾಚಾರಿ ಎಂಬವ ಎಂತಹ ಮೋಸ ಮಾಡಿದ್ದಾನೆ ? ನಿನ್ನನ್ನು ಏಕೆ ಅಧಿಕಾರದಿಂದ ತೊಲಗಿಸಿದ್ದಾನೆ ? ಅಧಿಕಾರವೆಂದರೆ ಅದೆಂತಹ ದೊಡ್ಡ ಅಧಿಕಾರ ? ಸ್ವಲ್ಪ ವಿವರವಾಗಿ ಹೇಳು ನೋಡುವಾ" ಎಂದು ಕೇಳಿದ ಜೀವದತ್ತ.

ಅರಣ್ಯಮಲ್ಲ ಅವನ ಕಥೆಯನ್ನೆಲ್ಲಾ ಸಂಕ್ಷೇಪವಾಗಿ ಹೇಳಿದನು. ಅದೇನೆಂದರೆ, ಅರಣ್ಯಪುರಕ್ಕೆ ಅರಣ್ಯಮಲ್ಲನ ತಂದೆ ರಾಜನಾಗಿದ್ದ. ಅವನು ಮೂರು ತಿಂಗಳ ಕೆಳಗೆ ತೀರಿಹೋದನು. ಅಂದಿನಿಂದ ಗಣಾಚಾರಿ ಅರಣ್ಯಮಲ್ಲನನ್ನು ರಾಜನಾಗದಂತೆ ತೊಲಗಿಸಿ ಹಾಕಲು ಬಹಳ ಪ್ರಯತ್ನ ಮಾಡುತ್ತಿದ್ದಾನೆ. ಅವನ ಯುಕ್ತಿಗಳಾವುದೂ ನೆರವೇರಲಿಲ್ಲ. ಕಡೆಗೆ ಒಂದು ವಾರದ ಕೆಳಗೆ ಗಣಾಚಾರಿ ಅರಣ್ಯಮಾತೆಯ ಆಲಯದಲ್ಲಿ ಕುಲದ ಹಿರಿಯರನ್ನೆಲ್ಲಾ ಕೂಡಿಸಿ ಅರಣ್ಯಪುರವನ್ನು ಪಾಲಿಸಲು ಅರಣ್ಯಮಲ್ಲ ಯೋಗ್ಯನಲ್ಲವೆಂದು ಸ್ವತಃ ಅರಣ್ಯಮಾತೆಯೇ ತನಗೆ ಹೇಳಿರುವಳೆಂದೂ, ಬೇಕಾದರೆ ಇನ್ನೊಂದು ಸಾರಿ ಆಕೆಯ ಬಾಯಿಯಿಂದಲೇ ಎಲ್ಲರೂ ಕೇಳಬಹುದೆಂದೂ ಹೇಳಿದನು.




ಎಲ್ಲರೂ ಅದನ್ನು ಕೇಳುವ ಕುತೂಹಲದಲ್ಲಿರುವಾಗ, ಗಣಾಚಾರಿ ಅರಣ್ಯ ಮಾತೆಯ ವಿಗ್ರಹಕ್ಕೆ ಧೂಪಾರತಿ ಮಾಡಿ—"ತಾಯೇ ! ಗುರು ಹಿರಿಯರೆಲ್ಲಾ ಕೇಳುವ ಹಾಗೆ ಹೇಳು. ಅರಣ್ಯಪುರವನ್ನು ಆಳಲು ಪಾಪಿಯಾದ ಈ ಅರಣ್ಯಮಲ್ಲನಿಗೆ ಅರ್ಹತೆ ಇದೆಯೆ ? ಅಥವಾ ಬೇರೆ ಯಾರಾದರೂ ಅದಕ್ಕೆ ಅರ್ಹರಾದವರು ಇದ್ದಾರೆಯೆ ? ಸ್ಪಷ್ಟವಾಗಿ ನಿನ್ನ ಅಭಿಪ್ರಾಯವನ್ನು ಹೇಳಮ್ಮ !" ಎಂದು ವಿನಯದಿಂದ ಕೈಮುಗಿದು ಕೇಳಿದನು.

ಆ ಕೂಡಲೇ ವಿಗ್ರಹದ ಬಾಯಿಯೊಳಗಿನಿಂದ, "ಅರಣ್ಯಮಲ್ಲ ಆಚಾರಗೇಡಿ. ಅರಣ್ಯಪುರವನ್ನಾಳಲು ತೀರಾ ಅನರ್ಹ ! ನನ್ನ ಪರಮಭಕ್ತ, ಗಣಾಚಾರಿಯಾದ ನೀನೇ ಸಿಂಹಾಸನವನ್ನೇರಿ ಪಾಲನೆ ಮಾಡಿದರೆ ಅರಣ್ಯಪುರವು ಸುಭಿಕ್ಷವಾಗುತ್ತದೆ. ಜಾತಿ ಅಭಿವೃದ್ಧಿಯಾಗುತ್ತದೆ !" ಎಂಬ ಮಾತುಗಳು ಹೊರಟುವು.




"ಕೇಳಿರಿ ! ಕೇಳಿರಿ ! ಕುಲದ ಹಿರಿಯರೇ, ಚೆನ್ನಾಗಿ ಕೇಳಿರಿ !" ಎಂದು ಗಣಾಚಾರಿ ಕುಣಿದಾಡತೊಡಗಿದನು. ಅರಣ್ಯಮಲ್ಲನು ಮಾತ್ರ ಕೋಪಾವೇಶದಿಂದ ಹೋಗಿ ಕಲ್ಲಿನ ಗದೆಯಿಂದ ಅರಣ್ಯ ಮಾತೆಯ ವಿಗ್ರಹವನ್ನು ಹೊಡೆದನು. ಆ ಪೆಟ್ಟಿಗೆ ವಿಗ್ರಹದ ಒಂದು ಕೈ ತುಂಡಾಗಿ ಬಿದ್ದುಹೋಯಿತು.

"ಅಪಚಾರ ! ಅಪಚಾರ ! ಈಗ ಎಲ್ಲರಿಗೂ ಗೊತ್ತಾಯಿತಲ್ಲ? ಕಣ್ಣಾರೆ ಇವನ ದ್ರೋಹ ನೋಡಿದಿರಲ್ಲ ! ಹಿಡಿಯಿರಿ ! ಚಿತ್ರವಧೆ ಮಾಡಿ ಕೊಲ್ಲಿರಿ !" ಎಂದು ಗಣಾಚಾರಿ ಕೂಗಾಡಿದನು.

ಅಲ್ಲಿ ಸೇರಿದವರಲ್ಲಿ ಕೆಲವರು ಓಡಿಬಂದು ಅರಣ್ಯಮಲ್ಲನನ್ನು ಹಿಡಿಯಲು ನೋಡಿದರು. ಅರಣ್ಯಮಲ್ಲನು ಹೇಗೋ ಅವರ ಕೈಯಿಂದ ತಪ್ಪಿಸಿಕೊಂಡು ಅರಣ್ಯದೊಳಗೆ ಸೇರಿಬಿಟ್ಟನು.

ಆ ಕ್ಷಣದಿಂದಲೂ ಗಣಾಚಾರಿಯ ಅನುಚರರು ಅವನನ್ನು ಶೋಧಿಸುತ್ತಲೇ ಇದ್ದರು. ಇನ್ನು ಜೀವದಿಂದ ಪಾರಾಗುವ ಆಶೆಯನ್ನು ಬಿಟ್ಟು ಅವನು ಹುಲಿಯ ಬಾಯಿಗೆ ಬಿದ್ದು ಸಾಯಲು ಅವುಗ ಮರಿಗಳನ್ನೆತ್ತಿಕೊಂಡು, ಹುಲಿಗೆ ಕೋಪ ಬರು ಹಾಗೆ ಮಾಡಿಕೊಂಡಿದ್ದನಂತೆ.

ಇಷ್ಟು ಕೇಳಿದ ಮೇಲೆ ಜೀವದತ್ತನು "ಹೀಗೇನು ಕಥೆ? ಕಲ್ಲಿನ ವಿಗ್ರಹದ ಬಾಯಿಯಿಂದ ಮಾತನ್ನು ಹೊರಡಿಸುವ ಗಣಾಚಾರಿಯ ದರ್ಶನವನ್ನು ಮಾಡದೆ ನಾವು ಹೋಗಬಾರದು. ಹೆದರಬೇಡ ಮಲ್ಲಾ, ನ ನಿನ್ನ ಅರಣ್ಯಪುರಕ್ಕೆ ದಾರಿ ತೋರಿಸು" ಎಂದನು.

ಅರಣ್ಯಮಲ್ಲ ಇನ್ನೂ ಹೆದರುತ್ತ, "ನೀವು ಅರಣ್ಯಪುರಕ್ಕೇ ಹೋಗುವುದೆ? ಅವನಿಗೆ ಅಸಂಖ್ಯ ಮಂದಿ ಅನುಚರರಿದ್ದಾರೆ. ಅವರಿಗೆಲ್ಲಾ ಗಣಾಚಾರಿಯ ಮಹಿಮೆಗಳಲ್ಲಿ ಬಹಳ ನಂಬುಗೆಯೂ ಇದೆ. ಅವನೊಬ್ಬ ಮಾಯಾವಿ" ಎಂದನು.

ಖಡ್ಗವರ್ಮನು ಕಿರುನಗೆ ನಗುತ್ತ, ಖಡ್ಗಮೃದವನೊಡನೆ, "ನೀನು ಕೂಡಾ ನಮ್ಮೊಂದಿಗೆ ಅರಣ್ಯಪುರಕ್ಕೆ ಬಂದು ನಮಗೆ ಸಹಾಯ ಮಾಡುವಿಯಾ, ಅಲ್ಲ ನನ್ನ ಸಾಕು ಹುಲಿಗೆ ಆಹಾರವಾಗಬವಿಯಾ?" ಎಂದು ಕೇಳಿದ.

ಖಡ್ಗಮೃಗದೊಡೆಯ ಗಡಗಡ ನಡುಗು "ಅಯ್ಯಾ, ನಮ್ಮ ಮೇಲೆ ದಯವಿಡಿರಿ ! ಅರಣ್ಯಮಲ್ಲನು ಆಚಾರಗೆಟ್ಟವನೆಂದು ಅರಣ್ಯ ಮಾತೆ ಹೇಳಿದಳು. ಅಷ್ಟೇ ಅಲ್ಲ, ಕಣ್ಣಾರೆ ನೋದೆವು ಕೂಡ. ಅಂಥವನಿಗೆ ನಾವು ಹೇಗೆ ಸಹಾ ಮಾಡಿಯೇವು?" ಎಂದನು.

ಜೀವದತ್ತನು ಅವನನ್ನು ನೋಡಿ, "ಅರ ನಾವೂ ಕಣ್ಣಾರೆ ನೋಡಿ ಕಿವಿಯಾರೆ ಕೇಳುವವ ನೀನೇನೂ ಸಹಾಯ ಮಾಡಬೇಡ. ನಿ ಮುಂದಿದ್ದು ನಮ್ಮನ್ನು ಅಲ್ಲಿಗೆ ಕರೆದುಕೊಂ ಹೋದರೆ ಸಾಕು" ಎಂದನು. ಅದ ಎಲ್ಲರೂ ಅರಣ್ಯಪುರದ ಕಡೆಗೆ ಹೊರ

ಖಡ್ಗವರ್ಮನು ಹುಲಿಯ ಮರಿಗಳನ್ನು ಭುಜದ ಮೇಲಿಟ್ಟುಕೊಂಡು ತಾಯಿ ಹುಲಿಯ ಕೊರಳಿನ ಬಳ್ಳಿಗಳನ್ನು ಬಿಚ್ಚಿ ಕರೆದುಕೊಂಡು ಹೊರಟನು. ಕಾಡುದಾರಿಯಲ್ಲಿ ಬಹಳ ದೂರ ನಡೆದು, ಸೂರ್ಯನು ಮುಳುಗುವ ಹೊತ್ತಿಗೆ ಅವರೆಲ್ಲ ಅರಣ್ಯಪುರವನ್ನು ಸೇರಿದರು. ಅವರನ್ನೆಲ್ಲ ನೋಡಿ ಗಣಾಚಾರಿ ಮತ್ತು ಅವನ ಅನುಚರರು ಯಾವುದೋ ಪಿಡುಗನ್ನು ಕಂಡವರಂತೆ ಹೆದರಿ ನಡುಗಲಾರಂಭಿಸಿದರು.

ಜೀವದತ್ತನು ತನ್ನ ದಂಡವನ್ನು ಎತ್ತಿ ಹಿಡಿದು ಉಚ್ಚ ಕಂಠದಿಂದ, "ಎಲೋ, ಅರಣ್ಯಪುರದ ಗಣಾಚಾರಿಯೇ, ಹೇಳುವ ಮಾತನ್ನು ಕಿವಿಗೊಟ್ಟು ಕೇಳು. ಈ ಅರಣ್ಯಪುರವೆಂದರೆ ಏನೋ ದೊಡ್ಡ ನಗರವಾಗಿರಬಹುದೆಂದುಕೊಂಡೆ; ಇಲ್ಲಿ ನೋಡಿದರೆ ಕೇವಲ ಬಂಡೆಕಲ್ಲಿನ ರಾಶಿಗಳೂ ಗುಹೆಗಳೂ ಕಾಣಿಸುತ್ತವೆ. ಗುಬ್ಬಿಯ ಗೂಡುಗಳ ಹಾಗೆ ಕಾಣುತ್ತಿದೆ ನಿಮ್ಮ ಅರಣ್ಯಪುರ. ನಾನು ಮನಸ್ಸು ಮಾಡಿದರೆ ಈ ಕ್ಷಣವೇ ನನ್ನ ಮಂತ್ರ ಶಕ್ತಿಯಿಂದ ಇದನ್ನು ಬೂದಿ ಮಾಡಬಲ್ಲೆ. ಆದರೆ ನಿಮ್ಮ ಅರಣ್ಯಮಾತೆಯ ಮಹತ್ವವನ್ನು ಕುರಿತು ಕೇಳಿ ಅದು ಸುಳ್ಳೋ ಸತ್ಯವೋ ಕಣ್ಣಾರೆ ಕಂಡು ಆಮೇಲೆ ನೋಡುತ್ತೇನೆ. ಏನು ಹೇಳುವಿ? ಹುಲಿಯ ಮಾತಿನಲ್ಲಿ ನಮ್ಮೆದಿರಿನಲ್ಲಿ ಎಲ್ಲವನ್ನೂ ತೋರಿಸುವಿಯಾ?" ಎಂದನು.

ಆಗ ಖಡ್ಗಮೃಗದವನು ಗಣಾಚಾರಿಗೆ ಅರಣ್ಯದಲ್ಲಿ ನಡೆದ ಸಂಗತಿಗಳನ್ನೆಲ್ಲಾ ಹೇಳಿದನು. ಅದನ್ನು ಕೇಳಿದ ಮೇಲೆ ಗಣಾಚಾರಿ ಇನ್ನಷ್ಟು ಹೆದರಿ, ಖಡ್ಗವರ್ಮ ಜೀವದತ್ತರ ಬಳಿಗೆ ಬಂದು ಬಗ್ಗಿ ನಮಸ್ಕಾರ ಮಾಡಿ, "ಅಯ್ಯಾ, ನಿಮ್ಮೊಂದಿಗಿರುವ ಅರಣ್ಯಮಲ್ಲನು ಅರಣ್ಯಮಾತೆಗೆ ಬಹಳ ಅಪಚಾರ ಮಾಡಿದ್ದಾನೆ. ಮಾತೆ ಸ್ವತಃ ತನ್ನ ಬಾಯಿಯಿಂದ ನಾನೇ ಸಿಂಹಾಸನವೇರಲು-ತಕ್ಕವನೆಂದು ಹೇಳಿದ್ದಾಳೆ. ಆಕೆಯ ಮಾತನ್ನು ಕೇಳುವಿರಾದರೆ, ರಾತ್ರಿ ಮೊದಲನೇಜಾಮ



ಕಳೆಯುವ ಹೊತ್ತಿಗೆ ನೀವು ಮಾತೆಯ ಆಲಯಕ್ಕೆ ಬರಬಹುದು. ನನ್ನಂಥ ಭಕ್ತನಿಗಾಗಿ ಮಹಾಮಾತೆ ಎಷ್ಟುಸಾರಿ ಬೇಕಾದರೂ ಹೇಳುವಳು" ಎಂದನು.

"ಬರುತ್ತೇನೆ. ನಿಮ್ಮ ಮಾತೆಯ ವಾಕ್ಯಗಳನ್ನು ಕಿವಿಯಾರೆ ಕೇಳಬೇಕು. ಮಾತೆಯ ಇಚ್ಛೆಯಾದರೆ ಈ ಅರಣ್ಯಮಲ್ಲನನ್ನು ನಿಮ್ಮ ಎದುರೇ ನಮ್ಮ ಹುಲಿಗೆ ಆಹಾರವನ್ನಾಗಿ ಹಾಕಿಬಿಡುತ್ತೇನೆ. ಆಮೇಲೆ ಇಲ್ಲಿ ನಮ್ಮ ಕೆಲಸ ತೀರಿತು" ಎಂದ ಜೀವದತ್ತ.

"ಹಾಗಾದರೆ ಧನ್ಯನಾದೆ. ಮಹಾಮಾಂತ್ರಿಕರೇ! ನಿಮ್ಮ ವಿಶ್ರಾಂತಿಗೂ, ಊಟಕ್ಕೂ ಏರ್ಪಾಡು ಮಾಡುತ್ತೇನೆ" ಎಂದ ಅರಣ್ಯಪುರದ ಗಣಾಚಾರಿ.

ಅವನ ಅನುಚರರು ಖಡ್ಗವರ್ಮ ಜೀವದತ್ತರನ್ನೂ, ಅವರೊಂದಿಗಿದ್ದವರನ್ನೂ ಒಂದು ಕಲ್ಮಂಟಪಕ್ಕೆ ಕರೆದುಕೊಂಡು ಹೋಗಿ, ತಂಗಲು ವಸತಿ ಪಡಿಸಿ ಕೊಟ್ಟರು. ರುಚಿಯಾದ ಆಹಾರ ಪದಾರ್ಥಗಳನ್ನೂ ತಂದಿರಿಸಿದರು.



ಆದಿನ ಹುಣ್ಣಿಮೆಯಾದುದರಿಂದ ಚಂದ್ರ ಪ್ರಕಾಶ ದಿಂದ ಅರಣ್ಯಪುರವು ಸುತ್ತುಮುತ್ತಲಿನ ಗುಡ್ಡ ಗಳಿಂದ, ಹೆಮ್ಮರದ ಹೊಳಪು ನೆರಳುಗಳಿಂದ ರುದ್ರ ಸೌಂದರ್ಯವಾಗಿತ್ತು. ಸರಿಯಾಗಿ ಮೊದಲನೇ ಜಾಮವು ಕಳೆದ ನಗಾರಿಯ ಶಬ್ದ ಹೊರಟಾಗ, ಗಣಾಚಾರಿಯ ಅನುಚರನೊಬ್ಬ ಬಂದು ಖಡ್ಗವರ್ಮ ಜೀವದತ್ತರನ್ನು ಕರೆದನು. ಅವರು ವಿಘ್ನೇಶ್ವರ ಪೂಜಾರಿಯನ್ನೂ, ಸ್ವರ್ಣಾಚಾರಿಯನ್ನೂ ಕರೆದು ಕೊಂಡು ಅರಣ್ಯಮಾತೆಯ ಮಂದಿರಕ್ಕೆ ಹೋದರು. ಅಷ್ಟು ಹೊತ್ತಿಗೆ ಅಲ್ಲಿ ಗಣಾಚಾರಿಯೂ ಅವನ ಅನುಚರರೂ ಸಿದ್ಧರಾಗಿ ಕುಳಿತಿದ್ದರು.

ಖಡ್ಗವರ್ಮ ಜೀವದತ್ತರು ಅರಣ್ಯಮಾತೆಯ ವಿಗ್ರಹದ ಬಳಿಗೆ ಹೋಗಿ ವಿಗ್ರಹವನ್ನು ಪರೀಕ್ಷಿಸಿ ನೋಡಿದರು. ಅದು ಆಳೆತ್ತರದ ವಿಗ್ರಹ. ಒಂದು ಕೈ ಮುರಿದು ಹೋಗಿತ್ತು. ಎರಡನೇ ಕೈಯಲ್ಲಿ ದೊಡ್ಡದೊಂದು ಕಲ್ಲಿನ ಗದೆ. ವಿಗ್ರಹದ ಬಾಯಿ ಯನ್ನು ದೊಡ್ಡದಾಗಿ ತೆರೆದಿರುವ ಹಾಗೆ ಕೆ... ಲಾಗಿತ್ತು. ಕಣ್ಣುಗಳು ಮಿಂಚುತಿದ್ದುವು.

ಗಣಾಚಾರಿ ವಿಗ್ರಹದ ಮುಂದೆ ಇದ್ದ ಹರಿವಾಣ ಗಳಲ್ಲಿ ಕಣಕಣಿಸುವ ಕೆಂಡಗಳ ಮೇಲೆ ಸಾಂಬ್ರಾಣಿ ಹಾಕಲು, ಗುಪ್ಪನೆ ಹೊಗೆಯೆದ್ದಿತು. ಅವನು ಸ್ವಲ್ಪ ಹೊತ್ತು ಮಂತ್ರಗಳನ್ನು ಉಚ್ಚರಿಸುತ್ತ, ಕೈಗಳನ್ನು ಕುಣಿಸುತ್ತ, ತನ್ನ ಅನುಚರನು ತಂದುಕೊಟ್ಟ ಹಣ್ಣುಗಳ ತಟ್ಟೆಯನ್ನು ಎತ್ತಿಕೊಂಡು ವಿಗ್ರಹದ ಮುಂದೆ ಹೋದನು. ಮಂತ್ರ ಹೇಳುತ್ತಾ ಬಾಳೆ ಹಣ್ಣುಗಳನ್ನು ಸುಲಿದು ಮಾತೆಯ ತೆರೆದ ಬಾಯಿ ಯೊಳಗೆ ಹಾಕಿದನು. ಆ ಮೇಲೆ ಕೈಜೋಡಿಸಿ "ಅರಣ್ಯಮಾತೆ! ಇನ್ನೊಂದುಸಾರಿ ಹೇಳಿಬಿಡು ಈ ರಾಜ್ಯವನ್ನು ಪಾಲಿಸುವ ಅರ್ಹತೆ ಉಳ್ಳವನು ನಾನೋ ನಿನ್ನ ಕೈಯನ್ನು ಕಡಿದು ಹಾಕಿದ ವಾಕ... ಅರಣ್ಯಮಲ್ಲನೋ? ಹೇಳಮ್ಮಾ" ಎಂದನು.

ಕೂಡಲೇ ವಿಗ್ರಹದ ಬಾಯಿಯೊಳಗಿನಿಂದ "ಅರಣ್ಯಮಲ್ಲ ಆಚಾರಹೀನ. ನನ್ನ ಕೈಯನ್ನು ಕಡಿದ ದುಷ್ಟ. ಗಣಾಚಾರಿಯೇ ನನ್ನ ರಾಜ್ಯವನ್ನು ಪಾಲಿಸಬೇಕು. ಅರಣ್ಯಮಲ್ಲನನ್ನು ನನಗೆ ಬಲಿಕೊಡು" ಎಂಬ ಮಾತುಗಳು ಕೇಳಿಸಿದುವು.

"ಕೇಳಿರಿ! ಕೇಳಿರಿ! ಮಾತೆಯ ಮಾತುಗಳು!" ಎಂದು ಕುಣಿಯತೊಡಗಿದ ಗಣಾಚಾರಿ.

ಜೀವದತ್ತನು ಕಿರುನಗೆ ಸೂಸಿ ಖಡ್ಗವರ್ಮನ ಕಿವಿಯಲ್ಲಿ ಏನನ್ನೋ ಹೇಳಿದನು. ಕೂಡಲೇ ಖಡ್ಗ ವರ್ಮ ಹುಲಿಯ ಬಳಿಗೆ ಹೋಗಿ ಕತ್ತಿ ಒರೆ... ಸಿದ್ಧನಾಗಿ ನಿಂತನು. ಜೀವದತ್ತನು ಗಣಾಚಾರಿಯ ಕಡೆಗೆ ಒಂದು ನೋಟ ಹಾರಿಸಿ, ವಿಗ್ರಹದ ಮುಂದೆ ತಣತಣನೆ ಸಾಂಬ್ರಾಣಿ ಹೊಗೆಯುಗುಳುತ್ತಿದ್ದ ಕೆಂಡದ ಹರಿವಾಣವನ್ನು ಎರಡು ಕೈಗಳಿಂದೆತ್ತಿ ವಿಗ್ರಹದ ಬಾಯಿಯೊಳಗೆ ಸುರಿದುಬಿಟ್ಟನು. ಮರುಕ್ಷಣದಲ್ಲಿ ವಿಗ್ರಹದ ಹೊಟ್ಟೆಯೊಳಗಿನಿಂದ ಕೆಟ್ಟ ದೊಂದು...

ಡುಧ್ವನಿ ಹೊರಟಿತು. ಎಲ್ಲರೂ ಆಶ್ಚರ್ಯದಿಂದ ನೋಡುತ್ತಿರಲು, ವಿಗ್ರಹದ ಹಿಂದಿದ್ದ ಮರದ ಪೆಟಾರಿಯ ಬಾಗಿಲು ತೆರೆದುಕೊಂಡು, ಸುಟ್ಟು ಹೊಗೆಯಾಡುವ ಬಟ್ಟೆಗಳೊಂದಿಗೆ ಒಬ್ಬ ಕಾಡು ಮನುಷ್ಯ ಹೊರಗೆ ಬಿದ್ದ.

ಇದೆಲ್ಲಾ ಕೆಲವು ಕ್ಷಣಗಳಲ್ಲೇ ಆಗಿಹೋಯಿತು. ಪೆಟಾರಿಯೊಳಗಿನಿಂದ ತನ್ನ ಶಿಷ್ಯ ಹೊರಬೀಳುವುದನ್ನು ನೋಡಿದ ಕೂಡಲೇ, ಗಣಾಚಾರಿ ಕೂಡಾ ಉಚ್ಚಸ್ವರದಿಂದ ಕೂಗಿ ಆಲಯದಿಂದ ವೇಗವಾಗಿ ಹೊರಗೆ ಓಡತೊಡಗಿದನು. ಅವನು ಆಲಯದ ಬಾಗಿಲನ್ನು ದಾಟುವಷ್ಟರಲ್ಲಿ ಖಡ್ಗವರ್ಮನು ಹುಲಿಯ ಹಗ್ಗವನ್ನು ಕಡಿದುಬಿಟ್ಟಿದ್ದನು. ಹುಲಿ ಓಡಿಹೋಗುತ್ತಿದ್ದ ಗಣಾಚಾರಿಯ ಬೆನ್ನು ಹತ್ತಿ ಹಾರಿ ಅವನ ಕುತ್ತಿಗೆಯನ್ನು ಹಿಡಿಯಿತು. ಆಗ ಆ ಕಡೆಗೆ ಓಡಿದ ಹುಲಿ ಮರಿಗಳೆರಡೂ, ತಾಯಿಯ ಹತ್ತಿರ ಸಂಭ್ರಮದಿಂದ ಕುಣಿಯತೊಡಗಿದುವು.

ಬೆಳುದಿಂಗಳ ಬೆಳಕಿನಲ್ಲಿ ಈ ಭಯಂಕರ ದೃಶ್ಯವನ್ನು ನೋಡಿ ಆಟವಿಕರೆಲ್ಲಾ ಗದಗದಿಸಿ ಹೋದರು. ಜೀವದತ್ತನು ಅವರನ್ನು ಕುರಿತು, "ಈಗ ಗಣಾಚಾರಿಯ ಮೋಸವನ್ನು ತಿಳಿದುಕೊಂಡಿರಷ್ಟೆ? ಇನ್ನು ನಿಮ್ಮ ರಾಜನಾರೋ ನಿಶ್ಚಯಿಸಿಕೊಳ್ಳಿ" ಎಂದನು. ಕೂಡಲೇ ಆಟವಿಕರೆಲ್ಲಾ ಏಕಕಂಠದಿಂದ, "ಅರಣ್ಯಮಲ್ಲನೇ ನಮಗೆ ರಾಜ!" ಎಂದು ಕೂಗಿದರು.

"ಸರಿ. ಅರಣ್ಯಮಲ್ಲ ಇಲ್ಲಿಯೇ ಇದ್ದಾನೆ. ಅವನಿಗೆ ಹೇಗೆ ರಾಜ್ಯಾಭಿಷೇಕ ಮಾಡುವಿರೋ ಮಾಡಿ. ನಾವು ಆಲಯದ ಮೇಲು ಛಾವಣಿಗೆ ಹೋಗಿ ಸ್ವಲ್ಪ ಬೆಳುದಿಂಗಳಲ್ಲಿ ವಿಶ್ರಮಿಸಿಕೊಳ್ಳುತ್ತೇವೆ" ಎಂದು ಹೇಳಿ ಜೀವದತ್ತನು ತನ್ನವರೊಂದಿಗೆ ಮೇಲೆ ಹೋದ.

ಅವನು ಆಲಯದ ಮೇಲ್ಛಾವಣಿಯಲ್ಲಿರುವಾಗ, ದೊಡ್ಡದೊಂದು ಬಿರುಗಾಳಿ ಎದ್ದು ಮರಗಿಡಗಳೆಲ್ಲಾ ಅಲುಗಾಡತೊಡಗಿದುವು. ಆಕಾಶದಲ್ಲಿ ಗುಡುಗಿನ




ಹಾಗೆ ವಿಚಿತ್ರ ಶಬ್ದವು ಹೊರಟಿತು. ಖಡ್ಗವರ್ಮ ಜೀವದತ್ತರು ತಲೆಯೆತ್ತಿ ನೋಡಿದರು. ದೂರದಲ್ಲಿ ಕರ್‍ರಗೆ ಮೋಡದಂತೆ ಏನೋ ಒಂದು ಆಕಾರವು ಸಮೀಪಿಸುತ್ತಿದ್ದಿತು.

ಆಶ್ಚರ್ಯದಿಂದ ಅವರು ಅದನ್ನೇ ನೋಡುತ್ತಿರುವಾಗ ಅದು ಅವರ ತಲೆಗೆ ನೇರಾಗಿ ಬಂದು ಆಕಾಶದಲ್ಲೇ ನಿಂತಿತು. ಅದು ಮೋಡವಲ್ಲ, ಒಂದು ರಥ. ಹಿಂದೆ ಪದ್ಮಪುರದ ರಾಜಕುಮಾರಿ ಪದ್ಮಾವತಿ ಖಡ್ಗವರ್ಮ ಜೀವದತ್ತರಿಗೆ ಕೊಟ್ಟ ಶಿಲಾರಥದ ಬೊಂಬೆಯಂತೆಯೇ ಅದೂ ಇತ್ತು.

ಆ ರಥದಲ್ಲಿ ಯಕ್ಷನೊಬ್ಬ ಕುಳಿತಿದ್ದ. ಅವನ ಪಕ್ಕದಲ್ಲಿ ಪದ್ಮಾವತಿಯೂ ಕುಳಿತಿದ್ದಳು. ಯಕ್ಷನು ಮೇಘಗರ್ಜನೆಯಂತಹ ಸ್ವರದಿಂದ, "ಖಡ್ಗವರ್ಮ ಜೀವಧತ್ತರೆ! ಇನ್ನು ನೀವು ವಿಂಧ್ಯಪರ್ವತಕ್ಕೆ ಹೋಗಿ ಶಿಲಾರಥವನ್ನು ಕದಲಿಸಬೇಕಾದ ಆಗತ್ಯವಿಲ್ಲ. ಇಗೋ ನೋಡಿರಿ, ಆ ರಥವನ್ನು ನಾನು ಕದಲಿಸಿ, ಆಕಾಶ

ಮಾರ್ಗದಿಂದ ಪದ್ಮಪುರಕ್ಕೆ ಹೋಗಿ, ರಾಜಕುಮಾರಿ ಪದ್ಮಾವತಿಯನ್ನು ಮದುವೆಮಾಡಿಕೊಂಡು ನನ್ನ ಪುರಕ್ಕೆ ಹೋಗುತ್ತಿದ್ದೇನೆ" ಎಂದನು.

"ಇದು ರಾಜಕುಮಾರಿಯ ಅಪಹರಣವಲ್ಲವಷ್ಟೆ? ರಾಜಕುಮಾರೀ, ಯಕ್ಷನ ಮಾತು ನಿಜವೇನಾ ?" ಎಂದು ಜೀವದತ್ತನು ಕೂಗಿ ಕೇಳಿದ.

ಜೀವದತ್ತನ ಪ್ರಶ್ನೆಗೆ ಯಕ್ಷನು ಗಟ್ಟಿಯಾಗಿ ನಕ್ಕನು. ಶಿಲಾರಥವು ಜಂಯ್ ಎಂಬ ಶಬ್ದದೊಂದಿಗೆ ಕದಲಿ ಆಕಾಶ ಪಥದಲ್ಲಿ ಮೇಲೆ ಮೇಲೆ ಸಾಗಿ ಅಂತರ್ಧಾನವಾಗಿ ಹೋಯಿತು.

"ಜೀವಾ, ನಮ್ಮ ಶ್ರಮವೆಲ್ಲವೂ ವ್ಯರ್ಥವಾಗಿ ಹೋಯಿತಲ್ಲವೆ ?" ಎಂದು ಖಡ್ಗವರ್ಮ ನಿರಾಶೆ ಯಿಂದ ಹೇಳಿದ.

"ನಮ್ಮ ಶ್ರಮ ವ್ಯರ್ಥವಾಯಿತೆಂದುಕೊಳ್ಳಬೇಡ. ನಾವು ಮಹಾವೀರರೆಂದು ನಿರೂಪಿಸಲು ವಿಂಧ್ಯ ಪರ್ವತಕ್ಕೆ ಹೊರಟವರು. ದಾರಿಯಲ್ಲಿ ಇದಿರಾದ ಎಲ್ಲಾ ಬಗೆಯ ಪ್ರಮಾದಗಳನ್ನೂ ನಮ್ಮ ಬಾಹು ಬಲದಿಂದ ಜಯಿಸಿ ಮಹಾವೀರರೆನಿಸಿಕೊಂಡಿದ್ದೇವೆ. ಇನ್ನೇಕೆ ಚಿಂತೆ ?" ಎಂದ ಜೀವದತ್ತ.

"ಅದೇನೋ ನಿಜವೇ. ನಾವು ಈ ಅರಣ್ಯಪುರ ದಲ್ಲೇ ಕೆಲವು ದಿನ ವಿಶ್ರಾಂತಿ ತೆಗೆದುಕೊಂಡು, ಇಲ್ಲಿ ಎಲ್ಲಿಯಾದರೂ ಒಂದು ಒಳ್ಳೆಯ ರಾಜ್ಯವನ್ನು ಸ್ಥಾಪಿಸಿದರೆ ಹೇಗಿದ್ದೀತು ?" ಎಂದ ಖಡ್ಗವರ್ಮ.

"ಬಹಳ ಉತ್ತಮ ಆಲೋಚನೆ. ನಮ್ಮ ನಿವಾಸವು ಪ್ರಸ್ತುತಕ್ಕೆ ಈ ಅರಣ್ಯವೇ. ಇಲ್ಲಿನವರೂ ನಮಗೆ ಹಿತರಾಗಿದ್ದಾರೆ. ರಾಜ್ಯಸ್ಥಾಪನೆಯ ವಿಷಯ ಆಮೇಲೆ ಆಲೋಚಿಸೋಣ" ಎಂದ ಜೀವದತ್ತ.

"ಮಹಾಶೂರರೆ, ನೀವು ಸ್ಥಾಪಿಸುವ ರಾಜ್ಯದ ಪ್ರಧಾನ ನಗರದ ನಿರ್ಮಾಣವನ್ನು ನನಗೆ ಬಿಟ್ಟುಬಿಡಿ. ನಾನು ನಿಮ್ಮ ದಾಸಾನುದಾಸ. ವಾಸ್ತು ಶಾಸ್ತ್ರದಲ್ಲಿ ನಾನು ಮಯನಿಗೆ ಸಮಾನನೆಂದು ನಂಬಬಹುದು" ಎಂದ ಈ ಮಾತನ್ನೆಲ್ಲಾ ಕೇಳಿ ಸ್ವರ್ಣಾಚಾರಿ.

"ಹೌದು. ನೀವು ಕತ್ತಿಯಿಂದ ಜಯಿಸಲಾರದು ದನ್ನು ನಾವು ಮಾಯೋಪಾಯದಿಂದ ಸಾಧಿಸಬಲ್ಲೆವು. ನಾನು ಆ ವಿದ್ಯೆಯಲ್ಲಿ ಶಕುನಿಗೆ ಸಮಾನ ನೆಂದುಕೊಳ್ಳಿ" ಎಂದ ವಿಘ್ನೇಶ್ವರ ಪೂಜಾರಿ.

"ನಿಮ್ಮ ಶಕ್ತಿಸಾಮರ್ಥ್ಯವನ್ನೆಲ್ಲಾ ಚೆನ್ನಾಗಿ ಕಂಡಿ ದ್ದೇವೆ. ನಿಜಕ್ಕೂ ನೀವು ಅಂಥವರೇ. ಖಡ್ಗಾ, ರಾತ್ರಿ ಬಹಳವಾಯಿತು. ಈ ಬೆಳುದಿಂಗಳಲ್ಲೇ ನಿದ್ರಿಸಿ ಬಿಡೋಣ" ಎಂದು ಹೇಳಿ ಜೀವದತ್ತನು, ಅಲ್ಲಿಯೇ ಕಾಲು ಚಾಚಿ, ಮಲಗಿಬಿಟ್ಟನು. ಅವನನ್ನನುಸರಿಸಿ ಖಡ್ಗವರ್ಮ ಜೀವದತ್ತರೂ, ವಿಘ್ನೇಶ್ವರಪೂಜಾರಿ, ಸ್ವರ್ಣಾಚಾರಿಗಳೂ ಅಲ್ಲಲ್ಲೇ ಸ್ಥಳ ನೋಡಿಕೊಂಡು ನಿದ್ದೆಮಾಡಿದರು.

(ಮುಗಿಯಿತು)





# ಕಣ್ಣಿನ ವೈದ್ಯ

ಎಷ್ಟಕ್ಕೂ ಬಿಡದವನಾದ ರಾಜಾತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಶ್ಮಶಾನದಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು "ರಾಜನೇ, ಬಹಳ ಶ್ರಮಪಡುವುದಕ್ಕಾಗಿ ಚಿಂತಿಸ ಬೇಡಯ್ಯ. ಏಕೆಂದರೆ, ಲೋಕದಲ್ಲಿ ಸಾಧಾರಣವಾಗಿ ಒಳಿತೂ ಕೆಡುಕೂ ಎರಡೂ ಬೆರೆತುಕೊಂಡೇ ಇರು ತ್ತವೆ. ಅದಕ್ಕೆ ನಿದರ್ಶನವಾಗಿ ನಿನಗೆ ತಪತಿಯ ವೃತ್ತಾಂತವನ್ನು ಹೇಳುತ್ತೇನೆ, ಕೇಳುತ್ತಾ ನಡೆದರೆ ಶ್ರಮ ತಿಳಿಯಲಾರದು" ಎಂದು ಕಥೆಯನ್ನು ಪ್ರಾರಂಭ ಮಾಡಿತು :

ಅನೇಕಾನೇಕ ವರ್ಷಗಳ ಹಿಂದೆ ನಾಗಾಪುರ ನಗ ರದಲ್ಲಿ ಒಬ್ಬಳು ವಿತಂತು ವಾಸಮಾಡಿಕೊಂಡಿದ್ದಳು. ಅವಳ ಹೆಸರೇ ತಪತಿ. ಒಬ್ಬಳೇ ಮಗಳು ಮಾತ್ರ ಅವಳಿಗಿದ್ದಳು. ತಪತಿ ತನ್ನ ಕುಮಾರಿಯೊಂದಿಗೆ ರಾಜಬೀದಿಯೂ, ಹೊಸ ದೇಶದ ರಹದಾರಿಯೂ ಕೂಡುವ ಸ್ಥಳದ ಹತ್ತಿರ ಒಂದು ಹಂಚಿನ ಮನೆಯಲ್ಲಿ ವಾಸಮಾಡಿಕೊಂಡಿದ್ದಳು. ಮನೆಯ ಹಿಂದೆ ಚಿಕ್ಕ

ಬೇತಾಳ ಕಥೆಗಳು



ದೊಂದು ತೋಟವಿದ್ದಿತು. ತಪತಿ ತನಗಾಗಿ ಅಲ್ಲ ದಿದ್ದರೂ ತನ್ನ ಮಗಳಿಗಾಗಿ ಎಷ್ಟು ಬೇಕಾದರೂ ಶ್ರಮಿಸುತ್ತಿದ್ದಳು. ಅವಳ ಸರ್ವಸ್ವವೂ ಆ ಹುಡು ಗಿಯೇ ಸರಿ. ಪುಣ್ಯವಶಾತ್ ಅವರಿಬ್ಬರ ದಿನಗಳು ಚೆನ್ನಾಗಿಯೇ ಸಾಗಿಕೊಂಡಿದ್ದುವು.

ಹೀಗಿರುವಾಗ ಚಿಕ್ಕ ಹುಡುಗಿಗೆ ಏನೋ ಕಣ್ಣು ನೋವು ಬರತೊಡಗಿತು. ಅವಳ ಕಣ್ಣುಗಳು ಕೆಂಪ ಗಾಗಿ, ಪುಳುಕು ಬರಹತ್ತಿತು. ತಪತಿ ತನಗೆ ತಿಳಿದ ಯಾವುದೋ ಮದ್ದು ಮಾಡಿದರೂ ಅದೇನೂ ಪ್ರಯೋಜನವಾಗಲಿಲ್ಲ. ಮರುದಿವಸ ಆ ಹುಡು ಗಿಯ ಕಣ್ಣುಗಳು ಬಾತಿದ್ದುವು.

ತಪತಿಗೆ ಬಹಳ ಗಾಬರಿಯಾಯಿತು. ಕಂಡ ವೈದ್ಯರ ಬಳಿಗೆಲ್ಲಾ ಓಡಿ ಸಲಹೆ ಕೇಳಿದಳು. ಕೆಲವರು ಕಣ್ಣಿಗೆ ಹಚ್ಚುವ ಲೇಪನ ಕೊಟ್ಟರು. ಕೆಲವರು ಏನೇನೋ ಕಟ್ಟುಕಟ್ಟಲು ಹೇಳಿದರು. ತಪತಿ ಪಾಪ, ಯಾರೇನು ಹೇಳಿದರೂ ಅದನ್ನೆಲ್ಲಾ ಮಾಡಿದಳು. ಆದರೆ ಒಂದು ಚಿಕಿತ್ಸೆ ಕೂಡಾ ಪರಿಣಾಮಕಾರಿಯಾಗ ಲಿಲ್ಲ. ಹುಡುಗಿಯ ಸಂಕಟವನ್ನು ನೋಡುತ್ತಿದ್ದ ತಾಯಿಯ ಪ್ರಾಣ ಹೊಡೆದುಕೊಳ್ಳುತ್ತಿತ್ತು. ಕಣ್ಣು ನೋವಿಗೆ ಜೋಡಿಯಾಗಿ ಹುಡುಗಿಗೆ ಬಾಯಿ ರುಚಿ ಕೆಟ್ಟು, ಆಹಾರ ಕೂಡಾ ಸೇರದೆ ಹೋಯಿತು.

ಸಮೀಪದಲ್ಲಿ ಯಾವುದೋ ಒಂದು ಗ್ರಾಮದಲ್ಲಿ ಯಾವನೋ ಒಬ್ಬ ಕ್ಷೌರಿಕನಿದ್ದಾನೆಂದೂ, ಅವನು ಅನೇಕ ಬಗೆಯ ಕಣ್ಣು ರೋಗಗಳನ್ನು ಗುಣಪಡಿ ಸುತ್ತಾನೆಂದೂ ತಪತಿಗೆ ಯಾರೋ ಹೇಳಿದರು. ಕೂಡಲೇ ಅವಳು ಮಗಳನ್ನು ಕರೆದುಕೊಂಡು ಆ ಗ್ರಾಮಕ್ಕೆ ಹೋದಳು.

ದಾರಿಯಲ್ಲಿ ನಡುಮಧ್ಯಾಹ್ನದ ಹೊತ್ತಿನಲ್ಲಿ ಒಂದು ಮರದ ಕೆಳಗೆ ಮುದುಕಿಯೊಬ್ಬಳು ಕುಳಿತು ಆಯಾಸ ಪರಿಹಾರ ಮಾಡಿಕೊಂಡಿದ್ದಳು. ಆ ಮುದುಕಿ ತಪತಿಯನ್ನು ನೆರಳಿಗೆ ಬರುವಂತೆ ಕರೆದಳು. ಅಲ್ಲಿ ನಡೆದ ಮಾತಿನ ಸಂದರ್ಭದಲ್ಲಿ ತಪತಿ ತನ್ನ ಮಗಳಿಗೆ ಬಂದಿರುವ ಕಣ್ಣು ನೋವನ್ನು ಕುರಿತು ಮುದುಕಿಯೊಡನೆ ಹೇಳಿದಳು.

ಎಲ್ಲಾ ಕೇಳಿದಾಗ ಆ ಮುದುಕಿ "ಹುಚ್ಚಳೇ, ಕಂಡ ಕಂಡ ಮದ್ದು ಮಾಯ ಮಾಡಿಸಿ ಹುಡುಗಿಯ ಕಣ್ಣು ತೆಗೆದುಬಿಡಬೇಡ. ಇನ್ನೂ ಸ್ವಲ್ಪದೂರ ಮುಂದೆ ಹೋದರೆ, ಎಡದ ಬದಿಯಲ್ಲಿ ಕಾಲುದಾರಿ ಯೊಂದು ಕಾಣುತ್ತದೆ. ಆ ದಾರಿಯಲ್ಲಿ ಸುಮಾರು ಅರ್ಧ ಗಂಟೆ ದೂರ ನಡೆದರೆ ಒಂದು ಬಾವಿ ಇದೆ. ಅದರ ನೀರು ಮಂಜಿನ ಹಾಗೆ ತಣ್ಣಗಿರುತ್ತದೆ. ಆ ನೀರಿನಿಂದ ನಿನ್ನ ಮಗಳ ಕಣ್ಣುಗಳನ್ನು ತೊಳೆ. ಕಣ್ಣು ಗಳು ಸರಿಯಾಗಿಬಿಡುತ್ತವೆ" ಎಂದಳು.

ತಪತಿ ಮುದುಕಿಯಿಂದ ಅನುಮತಿ ಪಡೆದು ಕೊಂಡು ತನ್ನ ಮಗಳ ಜತೆಯಲ್ಲಿ ಮುಂದೆ ನಡೆದಳು. ಅವರಿಬ್ಬರೂ ಮುದುಕಿ ಸೂಚಿಸಿದ ಬಾವಿಯ ಬಳಿ ಯನ್ನು ತಲಪಿದಾಗ ಸಂಜೆ ಮೂರನೇ ಜಾವ,

ತಪತಿ ಅಲ್ಲಿದ್ದ ಹಗ್ಗ ಬಿಂದಿಗೆಗಳ ಸಹಾಯದಿಂದ ನೀರು ಸೇದಿ, ಬಟ್ಟೆಯನ್ನು ನೀರಿನಲ್ಲಿ ಅದ್ದಿ ತನ್ನ ಮಗಳ ಕಣ್ಣುಗಳನ್ನು ಒರೆಸುತ್ತಾ ಇದ್ದಳು. ಆಗ ಆಕಸ್ಮಿಕವಾಗಿ ಅವಳ ಪಕ್ಕದಲ್ಲೇ ಒಬ್ಬ ಮನುಷ್ಯ ಪ್ರತ್ಯಕ್ಷನಾದನು.



ಥಕ್ಕನೆ ಯಾರೋ ಪ್ರತ್ಯಕ್ಷನಾಗಲು, ತಪತಿ ಹೆದರಿಬಿದ್ದು ಅವನನ್ನು ಮೇಲಿಂದ ಕೆಳಗಿನವರೆಗೆ ಪಿಳಿಪಿಳಿ ನೋಡಿದಳು. ಅವನು ಸಾಧಾರಣ ಬಟ್ಟೆಗಳನ್ನು ಉಟ್ಟು, ತೊಟ್ಟುಕೊಂಡಿದ್ದನಾದರೂ, ಒಟ್ಟಿನ ಮೇಲೆ ದೊಡ್ಡ ಮನುಷ್ಯನಂತೆ ಕಾಣಿಸುತ್ತಿದ್ದನು.

"ನಿನ್ನನ್ನು ನೋಡಿ ಹೆದರಿಬಿದ್ದೆನಯ್ಯಾ !" ಎಂದು ತಪತಿ ಉಸಿರುಬಿಟ್ಟಳು.

"ಸದ್ದು ಮಾಡದೆ ಬಂದದ್ದು ನನ್ನದೇ ತಪ್ಪು. ನಿನ್ನ ಮಗಳಿಗೆ ಬಂದ ಕಣ್ಣು ನೋವನ್ನು ಕುರಿತು ಕೇಳಿ, ಅದಕ್ಕೆ ಔಷಧ ಕೊಡೋಣವೆಂದು ಬಂದೆ. ಇದೋ, ಇದರೊಳಗೆ ಒಂದು ಲೇಪನವಿದೆ. ಈ ಲೇಪನವನ್ನು ಸ್ವಲ್ಪ ಸ್ವಲ್ಪವಾಗಿ ತೆಗೆದು ಹುಡುಗಿಯ ಕಣ್ಣಿಗೆ ಹಚ್ಚಿದರೆ, ವಾಸಿಯಾಗುತ್ತದೆ. ಇನ್ನು ಚಿಂತೆ ಬಿಡು" ಎಂದು ಹೇಳಿ ಅವನು ಒಂದು ಪುಟ್ಟಮರದ ಕರಡಿಗೆಯನ್ನು ತಪತಿಗೆ ಕೊಟ್ಟನು.

ತಪತಿ ಆ ಕರಡಿಗೆಯನ್ನು ಪಡೆದು ಮುಚ್ಚಳ ತೆರೆದು ನೋಡಿದಳು. ಅದರೊಳಗೆ ಹಸಿರು ಬಣ್ಣದ ಲೇಪನವಿದ್ದಿತು. ಮೂಗಿನ ಹತ್ತಿರ ಒಯ್ದು ವಾಸನೆ ನೋಡಿದಾಗ, ಯಾವುದೋ ಹೂವಿನ ಪರಿಮಳವಿದ್ದಿತು. ಈ ಔಷಧ ಕೊಟ್ಟುದಕ್ಕಾಗಿ ಕೃತಜ್ಞತೆ ಹೇಳೋಣವೆಂದು ನೋಡಿದಾಗ ಆ ಮನುಷ್ಯ ಕಾಣಿಸಲಿಲ್ಲ.

ಏನಾಗುತ್ತದೋ ಎಂಬ ಸಂದೇಹದಿಂದಲೇ ತಪತಿ ಕರಡಿಗೆಯೊಳಗಿನ ಲೇಪನ ಸ್ವಲ್ಪ ತೆಗೆದು ಮಗಳ ಕಣ್ಣಿಗೆ ಹಚ್ಚಿದಳು. ಸ್ವಲ್ಪ ಹೊತ್ತಿನಲ್ಲಿ ಆ ಹುಡುಗಿ, "ನೋವು ಕಡಮೆಯಾಗುತ್ತಿದೆ ಅಮ್ಮಾ" ಎಂದಳು. ಮತ್ತೆ ಕೆಲವು ಕ್ಷಣಗಳಲ್ಲಿ ಹುಡುಗಿ ಕಣ್ಣು ಚಿರಿಟಿಸಿಕೊಳ್ಳುವುದನ್ನು ಬಿಟ್ಟು, ಚೆನ್ನಾಗಿ ರೆಪ್ಪೆ ತೆರೆದಳು. ಕತ್ತು ತಿರುಗಿಸಿ ಸುತ್ತಲೂ ನೋಡತೊಡಗಿದಳು. ಆಗ ತಪತಿಗೆ ಉಂಟಾದ ಸಂತೋಷವನ್ನು ವರ್ಣಿಸಲು ಸಾಧ್ಯವಿಲ್ಲ. ಆಮೇಲೆ ಬೇರೆ ಚಿಕಿತ್ಸೆಗಳ ಗೊಡವೆ ಬಿಟ್ಟು ಇಬ್ಬರೂ ಹಿಂದಿರುಗಿದರು. ಆ ಸ್ಥಳದಿಂದ ತಮ್ಮ ಮನೆಯವರೆಗೆ ನಡೆದಾಗ ದಾರಿ ನಡೆದುದೇ ಅವರಿಗೆ ಗೊತ್ತಾಗಲಿಲ್ಲ.

ಮತ್ತೆರಡು ದಿನಗಳವರೆಗೆ ಆ ಲೇಪನ ಹಚ್ಚಿದಾಗ, ಹುಡುಗಿಯ ಕಣ್ಣು ಕೆಂಬಣ್ಣ ಹೋಗಿ ಸ್ವಚ್ಛವಾಯಿತು. ಕಣ್ಣುಗಳು ಎಂದಿನಂತಾದುವು. ತಪತಿ ಆ ಕರಡಿಗೆಯನ್ನು ಭದ್ರವಾಗಿಟ್ಟುಕೊಂಡಳು.

ಕೆಲವು ದಿನಗಳು ಕಳೆದ ಮೇಲೆ ತಪತಿಗೆ ತನ್ನ ಬಲಗಣ್ಣು ಏನೋ ಕರಕರವೆನ್ನುವಂತೆ ತೋರಿತು. ತನ್ನ ಮಗಳಿಗೆ ಬಂದಂತಹ ನೋವೇ ತನಗೂ ಅಂಟಿಕೊಂಡಿತೇನೋ ಎಂದು ಹೆದರಿದಳು. ಆದರೆ ಕರಡಿಗೆಯಲ್ಲಿಯ ಲೇಪನವನ್ನು ಹಚ್ಚಿಕೊಳ್ಳಲು ಅವಳಿಗೇಕೋ



ಸಂಕೋಚವೆನಿಸಿತು. ಏಕೆಂದರೆ, ಆ ಮನುಷ್ಯ ಯಾವನೋ, ಆ ಔಷಧವನ್ನು ಪ್ರತ್ಯೇಕವಾಗಿ ತನ್ನ ಮಗಳ ಕಣ್ಣಿಗಾಗಿ ತಯಾರಿಸಿರಬಹುದು. ಅದನ್ನು ತಾನು ಉಪಯೋಗಿಸಿದರೆ ಅಪಚಾರವಾಗುವು ದೇನೋ ಎಂದು ಹೆದರಿದಳು. ಆದರೆ ಬರಬರುತ್ತ ಅವಳ ಬಲಗಣ್ಣು ಕೆಂಪಗೆ ಪುಳುಕುಬಿಡುತ್ತ ಬೆಳಕು ನೋಡಲಾಗದಂತೆ ಬಾಧಿಸತೊಡಗಿತು.

"ನಿನ್ನ ಮಗಳ ಹೊರತು ಮತ್ತಾರೂ ಇದನ್ನು ಉಪಯೋಗಿಸ ಕೂಡದು, ಎಂದು ಆ ಮನುಷ್ಯ ಹೇಳ ಲಿಲ್ಲವಷ್ಟೆ? ಉಪಯೋಗಿಸಿದರೆ ತಪ್ಪೇನಿರಲಿಕ್ಕಿಲ್ಲ. ನಷ್ಟ ವಾಗಲಿಕ್ಕೂ ಇಲ್ಲ" ಎಂದುಕೊಂಡು ತಪತಿ ಆ ಲೇಪನ ಸ್ವಲ್ಪ ತನ್ನ ಬಲಗಣ್ಣಿನ ಮೇಲೆ ಹಚ್ಚಿ ತಿಕ್ಕಿಕೊಂಡಳು. ನೋವೂ ಕೂಡಲೇ ಕಡಮೆಯಾಗಿ, ಎರಡು ಮೂರು ದಿನಗಳಲ್ಲಿ ಕಣ್ಣು ಎಂದಿನಂತೆ ಆಗಿಹೋಯಿತು.

ಕೆಲವು ತಿಂಗಳು ಕಳೆದುವು. ಒಂದುದಿನ ತಪತಿ ಸಂತೆಗೆ ಹೋಗಿದ್ದಳು. ಅವಳು ಅಂಗಡಿಗಳನ್ನೆಲ್ಲಾ ನೋಡುತ್ತ ನಡೆಯುತ್ತಿರುವಾಗ, ಒಂದು ತಿರುಗಿ ಜಾಗದಲ್ಲಿ ಕೆಲವು ಗೋಣೀಚೀಲಗಳ ಬಾಯಿ ಬಿಚ್ಚಿ ಇಟ್ಟಿರುವುದನ್ನು ನೋಡಿದಳು. ಎಲ್ಲವೂ ಬರಿನೆಲದ ಮೇಲೆಯೇ ಇರಿಸಲ್ಪಟ್ಟಿವೆ. ಯಾವ ಚೀಲದಲ್ಲಿ ಯಾವ ಧಾನ್ಯವಿದೆಯೋ ಕಾಣುತ್ತಿತ್ತು. ಆದರೆ ಆ ಚೀಲಗಳ ಒಡೆಯನೊಬ್ಬನೂ ಅಲ್ಲಿ ಕಾಣಿಸುತ್ತಿರಲಿಲ್ಲ. ಕಾವಿ ಬಣ್ಣದ ಧೋತ್ರ ಕಟ್ಟಿಕೊಂಡಿದ್ದ ಒಬ್ಬ ಮನುಷ್ಯ ಒಂದು ಚೀಲದಲ್ಲಿದ್ದ ಧಾನ್ಯವನ್ನು, ತನ್ನ ಕೈಯಲ್ಲಿದ್ದ ಕಿರುಚೀಲದೊಳಗೆ ತುಂಬಿಸಿಕೊಳ್ಳುತ್ತಿದ್ದಾನೆ. ತಪತಿ ಅವನನ್ನು ನೋಡಿ ಆಶ್ಚರ್ಯಪಡುತ್ತ, ತನ್ನ ಸಮೀಪ ದಲ್ಲಿದ್ದ ಹೆಂಗುಸಿನೊಂದಿಗೆ, "ಆ ಮನುಷ್ಯನನ್ನು ನೋಡಿದೆಯಾ? ಎಂತಹ ಹಾಳು ಕೆಲಸ ಮಾಡು ತ್ತಾನೆ!" ಎಂದು ಕೈಬೆರಳು ಮಾಡಿ ತೋರಿಸಿದಳು.

"ಯಾವ ಮನುಷ್ಯ?" ಎಂದು ತಿರುಗಿ ಅವಳನ್ನು ಕೇಳಿದಳು ಆ ಹೆಂಗುಸು.

"ಕಾವಿಬಣ್ಣದ ಬಟ್ಟೆ ಕಟ್ಟಿಕೊಂಡಿದ್ದಾನಲ್ಲ! ಅಲ್ಲಿ ಆ ಗೋಣೀಚೀಲಗಳ ಹತ್ತಿರ? ಅವನ ಕೆಲಸ ನೋಡಿದೆಯಾ?" ಎಂದಳು ತಪತಿ.

"ಅಲ್ಲಿ ಯಾರೂ ಇಲ್ಲವಲ್ಲಾ? ಕಣ್ಣಿಗೆ ಕಾಣುವಷ್ಟು ದೂರ ಕಾವಿಬಟ್ಟೆ ಉಟ್ಟವರು ಯಾರೂ ಇಲ್ಲ! ಯಾವನೋ ಏನೋ ಮಾಡುತ್ತಾನೆಂದು ಹೇಳುತ್ತೀ ಯಲ್ಲ?" ಎಂದಳು ಆ ಹೆಂಗುಸು.

ಅವಳೊಡನೆ ಮಾತಾಡಿ ಪ್ರಯೋಜನವಿಲ್ಲವೆಂದು ಕೊಂಡು ತಪತಿ ತಾನೇ ಆ ಕಳ್ಳನ ಸಮೀಪಕ್ಕೆ ಹೋದಳು. ಆಗ ತಿಳಿಯಿತು, ಅವನು ತನಗೆ ಆ ದಿನ ಬಾವಿಯ ಹತ್ತಿರ ಲೇಪನ ಕೊಟ್ಟವನೇ.

ತಪತಿ ಅವನನ್ನು ಕುರಿತು, "ಏನಪ್ಪಾ, ನೀನು ಇಂತಹ ಕೆಲಸ ಮಾಡಬಹುದೆ? ನಿನ್ನ ಹತ್ತಿರ ಹಣ ವಿಲ್ಲದಿದ್ದರೆ ನಾನು ಕೊಡುತ್ತೇನೆ ಹಿಡಿ. ಒಂದುಸಾರಿ ನೀನು ನನಗೆ ಸಹಾಯ ಮಾಡಿದೆ. ಈಗ ನಾನು ನಿನಗೆ ಸಹಾಯ ಮಾಡುತ್ತೇನೆ. ಕಷ್ಟ ಬರುವಾಗ ಯಾರಿ

ಣದರೂ ಬಂದೇ ಬರುತ್ತದಷ್ಟೆ?" ಎಂದಳು. ಅವನು ತಟಕ್ಕನೆ ತಲೆಯೆತ್ತಿ ತಪತಿಯನ್ನು ನೋಡಿ, ಮೆಲ್ಲನಿಯಿಂದ "ಯಾವ ಕಣ್ಣಿನಿಂದ ನೀನು ನನ್ನನ್ನು ನೋಡುತ್ತಿರುವಿ?" ಎಂದು ಕೇಳಿದ.

ತಪತಿ ಒಂದರ ತರುವಾಯ ಒಂದು ಕಣ್ಣನ್ನು ಮುಚ್ಚಿ ತೆರೆದು, ಆಶ್ಚರ್ಯಪಡುತ್ತ, "ಅಂದ ಹಾಗೆ ಏನೋ? ನನ್ನ ಬಲಗಣ್ಣಿಗೆ ಮಾತ್ರ ನೀನು ಕಾಣು ತ್ತಿರುವೆಯಪ್ಪಾ" ಎಂದಳು.

ಕೂಡಲೇ ಆ ಮನುಷ್ಯ ತಪತಿಯ ಬಲಗಣ್ಣಿಗೆ ಕಾಣದೆ ಮಾಯವಾಗಿ ಹೋದ. ತಪತಿ ಬಲಗಣ್ಣನ್ನು ಮುಚ್ಚಿ ಮತ್ತೆ ತೆರೆದಾಗ, ಆ ಕಣ್ಣಿಗೆ ದೃಷ್ಟಿಪಾಟವ ಇಲ್ಲದೆ ಹೋಯಿತು.

ಆದರೂ ತಪತಿ ನಡೆದು ಹೋದುದಕ್ಕಾಗಿ ಪಶ್ಚಾ ತ್ತಾಪ ಪಡಲಿಲ್ಲ. ಅವಳು ಆ ಲೇಪನದ ಕರಡಿಗೆ ಯನ್ನು ಮಾತ್ರ ಆಮೇಲೆ ಎಂದೂ ತೆರೆಯಲಿಲ್ಲ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ತಪತಿ ತನಗೆ ಉಪಕಾರ ಮಾಡಿದವನೆಂದು ತಿಳಿದು ಕೂಡಾ ಅವನನ್ನು ಏಕೆ ಕ್ಷಮಿಸಲಾರದೆ ಹೋದಳು? ಅವಳಿಗೆ ಪ್ರಪಂಚ ಜ್ಞಾನವಿಲ್ಲದುದರಿಂದಲೇನಾ? ಇಲ್ಲ. ಅವಳಲ್ಲಿ ಕೃತಜ್ಞತೆಯೇ ಇಲ್ಲವೆ? ಅವಳು ಅವನು ಕೊಟ್ಟ ಲೇಪನವನ್ನು ಮತ್ತೆ ಏತಕ್ಕೆ ಉಪ ಯೋಗಿಸಲಿಲ್ಲ? ಈ ಸಂದೇಹಗಳಿಗೆ ಸರಿಯಾದ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಚೂರಾಗುತ್ತದೆಂದು ತಿಳಿ" ಎಂದು ಹೇಳಿ ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಆ ಲೇಪನ ಕೊಟ್ಟವನು ತಪತಿಗೆ ಮಾತ್ರವೇ ಸಹಾಯ ಮಾಡಿ ದ್ದಾನೆ. ಆ ಸಹಾಯ ಪಡೆದ ಮಾತ್ರದಿಂದ ತಪತಿ ಒಳಿತು ಕೆಡುಕುಗಳ ಭೇದಗಳನ್ನು ಕಳೆದುಕೊಂಡರೆ ಸ್ವಾರ್ಥವೆನಿಸುತ್ತದೆ. ಅವಳಲ್ಲಿ ಸಾರ್ಥವಿಲ್ಲ. ಅವಳು ಯಾವ ಕೆಲಸ ಮಾಡಿದರೂ, ಔಚಿತ್ಯವನ್ನು ಕುರಿತು ಆಲೋಚಿಸುವಂಥವಳು. ಅವಳಿಗೆ ಅವನ ಮೇಲೆ ಕೃತಜ್ಞತೆ ಇದ್ದುದರಿಂದಲೇ ಅವನಿಗೆ ಹಣ ಕೊಡುತ್ತೇ ನೆಂದಳು. ಆ ಸಂದರ್ಭದಲ್ಲಿ ತಾನು ಧರ್ಮವೆಂದು ಕೊಂಡ ಕೆಲಸವನ್ನೇ ಮಾಡಿದೆನೆಂಬ ನಂಬಿಗೆ ಅವಳಿ ಗಿದ್ದುದರಿಂದ, ಕಣ್ಣು ಹೋದರೂ ಅವಳೇನೂ ಪಶ್ಚಾತ್ತಾಪಪಡಲಿಲ್ಲ. ನಡತೆಗೇಡಿಯ ಸಹಾಯವು ಒಳ್ಳೆಯದಲ್ಲವೆಂತಲೇ ತಪತಿ ಮತ್ತೆ ಆ ಕರಡಿಗೆಯ ಲೇಪನವನ್ನು ಉಪಯೋಗಿಸಲಿಲ್ಲ. ಆದುದರಿಂದ ತಪತಿಯ ಗುಣದಲ್ಲಿಯೂ ಪ್ರವರ್ತನೆಯಲ್ಲಿಯೂ ಯಾವ ಲೋಪವೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಗೆ ನೇತುಹಾಕಿಕೊಂಡಿತು.



# ಸತ್ತರೂ ಬಿಡಳು!

**ಒಂ**ದು ಹಳ್ಳಿಯಲ್ಲಿ ಒಬ್ಬ ಅಗಸನಿದ್ದ. ಅವನ ಹೆಂಡತಿ ಮಹಾಚಂಡಿ. ಗಂಡ ಬೇಡವೆಂದುದನ್ನು ತಪ್ಪದೆ ಮಾಡುವಳು. ಒಂದುದಿನ ಗಂಡ ಹೆಂಡಿರು ಬಟ್ಟೆ ಒಗೆಯಲು ನದಿಗೆ ಹೋದರು. ಅವರು ದಿನಾ ಬಟ್ಟೆ ಒಗೆಯುವ ಸ್ಥಳದಲ್ಲಿ, ನೀರಿನ ಸೆಳೆತ ಜಾಸ್ತಿಯಾಗಿದ್ದುದರಿಂದ ಅಗಸ, "ಈ ದಿನ ಇಲ್ಲಿ ಒಗೆಯಬಾರದು, ಬೇರೆ ಕಡೆಗೆ ಹೋಗೋಣ" ಎಂದ. ಆದರೆ ಅವನ ಹೆಂಡತಿ ಮೊಂಡು ಹಿಡಿದು ನದಿಗೆ ಇಳಿದು ಪ್ರವಾಹದಲ್ಲಿ ಸಿಕ್ಕಿ ಹೊಡೆದುಕೊಂಡು ಹೋಗಿ ಸತ್ತಳು. ಆಮೇಲೆ ಅವಳು ದೆವ್ವವಾಗಿ ಇನ್ನೊಂದು ಅಗಸರ ಹುಡುಗಿಯನ್ನು ಹಿಡಿದುಕೊಂಡಳು. ಆ ದೆವ್ವವನ್ನು ಬಿಡಿಸಲು ಎಂತೆಂತಹ ಭೂತ ವೈದ್ಯರಿಂದಲೂ ಸಾಧ್ಯವಾಗದೆ ಹೋಯಿತು.

ಈ ಸಂಗತಿ ಅಗಸನಿಗೆ ತಿಳಿದು, "ಆ ದೆವ್ವವನ್ನು ನಾನು ಓಡಿಸುತ್ತೇನೆ. ಒಂದು ಕ್ಷಣ ಆ ದೆವ್ವ ಹಿಡಿದ ಹುಡುಗಿಯ ಹತ್ತಿರ ನನ್ನನ್ನು ಮಾತಾಡಲು ಬಿಡಿ" ಎಂದು ಆ ಹುಡುಗಿಯ ತಂದೆಯೊಂದಿಗೆ ಹೇಳಿ ಒಪ್ಪಿಗೆ ಪಡೆದ.

ಅಗಸ ದೆವ್ವ ಹಿಡಿದ ಹುಡುಗಿಯ ಕಿವಿಯಲ್ಲಿ ಗುಟ್ಟಾಗಿ, "ಎಲೆ, ನೀನು ಸೇರಿರುವ ಈ ಸ್ಥಳ ಬಹಳ ಒಳ್ಳೇದಿದೆ. ಇಲ್ಲಿ ನಿನಗೆ ಯಾವ ಕೊರತೆಯೂ ಆಗದು. ಎಂದಿಗೂ ಈ ಹುಡುಗಿಯನ್ನು ಬಿಟ್ಟು ಹೋಗಬೇಡ" ಎಂದ. ಉತ್ತರ ಕ್ಷಣದಲ್ಲೇ ದೆವ್ವ ಆ ಹುಡುಗಿಯನ್ನು ಬಿಟ್ಟು ಹೋಗಿಬಿಟ್ಟಿತು. ಆ ಹುಡುಗಿಯನ್ನೇ ಅಗಸನಿಗೆ ಕೊಟ್ಟು ಮರುಮದುವೆ ಮಾಡಿದರು.





# ಬಾತುಗಳ ಬಸಪ್ಪ

ಒಂದಾನೊಂದು ಊರಿನಲ್ಲಿ ಒಬ್ಬಳು ಬಡವೆಗೆ ಬಸಪ್ಪನೆಂಬ ಒಬ್ಬ ಮಗನಿದ್ದ. ತಾಯಿ ಅವನ ಕೈಯಿಂದ ಯಾವ ಕೆಲಸ ಮಾಡಿಸಲಿಕ್ಕೂ ಅಶಕ್ತಳಾಗಿ ಹೋದಳು. ಅವನಿಗೆ ಯಾವ ಕೆಲಸ ಮಾಡಲೂ ಇಷ್ಟವಿರಲಿಲ್ಲ. ಯಾವ ರೈತನ ಕೆಳಗಾದರೂ ಗೇಣಿಗಾರನಾಗಿ ಇಡಿಸೋಣವೆಂದರೆ, ಅವನು "ಒಬ್ಬರ ಕೈಕೆಳಗೆ ನಾನು ಕೆಲಸ ಮಾಡಲಾರೆ" ಎಂದು ಹಟ ಹಿಡಿಯುತ್ತಿದ್ದ.

ಆ ಬಡವೆಗೆ ಎರಡು ಹೆಣ್ಣು ಬಾತು ಕೋಳಿಗಳೂ, ಒಂದು ಗಂಡು ಬಾತು ಕೋಳಿಯೂ ಹದಿನಾರು ಮರಿ ಬಾತುಗಳೂ ಇದ್ದುವು. ಅವುಗಳನ್ನು ಕಾಯುವು ದೆಂದರೆ ಬಸಪ್ಪನಿಗೆ ಬಹಳ ಖುಷಿ. ಒಂದುದಿನ ಅವನು ತಾಯಿಯ ಹತ್ತಿರ, ಮರಿಬಾತುಗಳನ್ನು ಪಟ್ಟಣಕ್ಕೆ ಒಯ್ದು ಮಾರಿ ಬರುವುವಾಗಿ ಹೇಳಿ, ಬಾತುಗಳನ್ನು ಸಾಗಿಸಿಕೊಂಡು ಹೊರಟ.

ಪಟ್ಟಣದ ಬೀದಿಯಲ್ಲಿ ಬಗೆಬಗೆಯ ವ್ಯಾಪಾರಿಗಳ ಗುಂಪು ಯಾವಾಗಲೂ ಸಂತೆಗಟ್ಟಿಕೊಂಡಿರುತ್ತದೆ. ಬಸಪ್ಪನು ಬಾತು ಮರಿಗಳನ್ನು ಸಾಗಿಸಿಕೊಂಡು ಅಲ್ಲಿಗೆ ತಲಪಿದಾಗ, ವೀರಸ್ವಾಮಿ ಎಂಬ ಧನಿಕನು ಅವನನ್ನು ನೋಡಿ, "ಏನಪ್ಪಾ, ಬಾತುಗಳನ್ನು ಹೇಗೆ ಮಾರುವಿ?" ಎಂದು ಕೇಳಿದ.

"ಜತೆಗೆ ಎರಡು ಬೆಳ್ಳಿ ವರಹ. ದೇವರೇ ಬಂದು ಕೇಳಿದರೂ ಅದಕ್ಕಿಂತ ಕಡಿಮೆಗೆ ಇವುಗಳನ್ನು ಮಾರುವುದಿಲ್ಲ" ಎಂದ ಬಸಪ್ಪ.

ಈ ವೀರಸ್ವಾಮಿ ಸಾಮಾನ್ಯ ಮನುಷ್ಯನಾಗಿರಲಿಲ್ಲ. ಇಡಿಯ ನಗರವನ್ನೇ ಕೊಂಡುಕೊಳ್ಳುವಷ್ಟು ಧನಿಕ; ಆ ನಗರದಲ್ಲಿ ಕಿರೀಟವಿಲ್ಲದ ರಾಜ ಅವನೇ. ಬಸಪ್ಪನ ಮಾತಿನಿಂದ ಕೋಪಗೊಂಡ ಅವನು "ಕಳ್ಳಮಗನೇ, ನನ್ನ ಹತ್ತಿರ ಚೌಕಾಸಿ ಮಾಡುವವನೇ ನೀನು? ಜತೆಗೆ ಎರಡು ಸೀಸದ ಆಣೆ ಕೊಡುತ್ತೇನೆ" ಎಂದ.

"ಎರಡು ಬೆಳ್ಳಿ ವರಹಗಳೆಂದು ಮೊದಲೇ ಹೇಳಿದೆನಲ್ಲವೆ?" ಎಂದ ಬಸಪ್ಪ.

"ಈ ಪೊಗರು ಪೋತನನ್ನು ಮನೆಗೆ ಎಳೆದು ತನ್ನಿ. ಬಾತುಗಳನ್ನೂ ಸಾಗಿಸಿಕೊಂಡು ಬನ್ನಿ" ಎಂದು ವೀರಸ್ವಾಮಿ ತನ್ನೊಂದಿಗಿದ್ದ ಇಬ್ಬರು ಸೇವಕರಿಗೆ ಅಪ್ಪಣೆ ಕೊಟ್ಟ. ಬಸಪ್ಪನನ್ನು ಅವರು ವೀರಸ್ವಾಮಿಯ ಮನೆಗೆ ಎಳೆದುಕೊಂಡು ಹೋಗಿ, ಒಡೆಯನ ಆಜ್ಞೆಯಂತೆ ಹುಣಿಸೇ ಕೋಲಿನಿಂದ ಇಪ್ಪತ್ತೈದು

ಎಸ್. ಶಿವರಾಮಣ್ಣ



ಏಟುಗಳನ್ನು ಹೊಡೆದರು. ಬಾತುಮರಿಗಳ ಬೆಲೆ ಈ ರೂಪದಲ್ಲಿ ಅವನಿಗೆ ಸಿಕ್ಕಿತು.

ಏಟುಗಳನ್ನು ತಿಂದ ಬಸಪ್ಪ, "ಇದಕ್ಕೆ ಮೂರು ಪಾಲು ಸೇರಿಸಿ ವಸೂಲು ಮಾಡದೆ ಹೋದರೆ ನನ್ನ ಹೆಸರು ಬಸಪ್ಪನಲ್ಲ!" ಎಂದ.

ಅದನ್ನು ಕೇಳಿ ವೀರಸ್ವಾಮಿ ಮತ್ತಷ್ಟು ಕೋಪಗೊಂಡು, ಬಸಪ್ಪನಿಗೆ ಇನ್ನೂ ಮೂವತ್ತು ಏಟುಗಳನ್ನು ಹೊಡೆಸಿ ಹೊರಗೆ ದೂಡಿಸಿದ.

ಆಮೇಲೆ ಬಸಪ್ಪನು ಬಹಳ ವರ್ಷಗಳವರೆಗೆ ಊರೂರು ತಿರುಗುತ್ತ, ಹೇಗೋ ತನ್ನ ಪಾಡಿಗೆ ತಾನು ಬದುಕಿ ಬೆಳೆಯುತ್ತ ದೊಡ್ಡವನಾದ. ಆದರೆ ವೀರಸ್ವಾಮಿಯನ್ನು ಮಾತ್ರ ಮರೆಯಲಿಲ್ಲ. ಅವನ ಮೇಲಿನ ಹಗೆ ಸ್ವಲ್ಪವೂ ತಗ್ಗಲಿಲ್ಲ.

ಮುಂದೆ ಒಂದುದಿನ ಅವನು ವೀರಸ್ವಾಮಿಯ ನಗರಕ್ಕೆ ಬಂದು ನೋಡಿದಾಗ, ವೀರಸ್ವಾಮಿ ದೊಡ್ಡದೊಂದು ಭವನವನ್ನು ಕಟ್ಟಿಸುವನೆಂದು ಗೊತ್ತಾಯಿತು. ಕೂಡಲೇ ಅವನು ಬಡಗಿಯ ಹಾಗೆ ವೇಷ ಹಾಕಿಕೊಂಡು, ಕಟ್ಟಡದ ಜಾಗೆಗೆ ಹೋಗಿ, ಅಲ್ಲೊಂದುಕಡೆ ಪೇರಿಸಿಟ್ಟಿದ್ದ ಹಲಗೆಗಳನ್ನು ತನಿಖೆ ಮಾಡತೊಡಗಿದ.

ವೀರಸ್ವಾಮಿ ಅವನನ್ನು ನೋಡಿ ಸಮೀಪ ಬಂದು "ಯಾರು ನೀನು? ನಿನಗೆ ಹಲಗೆಗಳ ಗುಣಜಾತಿ ಗೊತ್ತೇನು?" ಎಂದು ಕೇಳಿದ.

"ನಾನು ದೂರ ದೇಶದ ಬಡಗಿ. ಕೆಲಸ ಕಲಿತು ಹೆಸರು ಪಡೆದಿದ್ದೇನೆ. ಹಲಗೆಯ ಗುಣದೋಷ ಗೊತ್ತಿಲ್ಲದೆ ಏನು ಸ್ವಾಮೀ?" ಎಂದ ಬಸಪ್ಪ.

"ಇಲ್ಲಿ ಕಟ್ಟುವ ಮನೆಗೆ ಈ ಹಲಗೆ ತಕ್ಕದಾಗಿರುತ್ತದೆಯೆ?" ಎಂದು ಕೇಳಿದ ವೀರಸ್ವಾಮಿ.

"ಮನೆಗೆ ತಕ್ಕ ಭವ್ಯತೆ ಬರಬೇಕಾದರೆ ಈ ಹಲಗೆ ಚೆನ್ನಾಗಿಲ್ಲ ಸ್ವಾಮಿ" ಎಂದ ಬಸಪ್ಪ.

ವೀರಸ್ವಾಮಿ ಸ್ವಲ್ಪ ಆಲೋಚನೆ ಮಾಡುತ್ತ, "ನನ್ನದೊಂದು ಸಣ್ಣ ಕಾಡಿದೆ. ಅಲ್ಲಿಗೆ ಹೋಗೋಣ ನಡೆ. ಹಲಗೆಗೆ ಸರಿಯಾದ ಮರವನ್ನು ನೀನು ತೋರಿಸು ನೋಡೋಣ" ಎಂದ.

ಇಬ್ಬರೂ ಕೂಡಿ, ಮರ ಕಡಿಯುವವರನ್ನು ಕರೆದುಕೊಂಡು ಕಾಡಿಗೆ ಹೋದರು. ಬಸಪ್ಪನು ಕಡಿಯಬೇಕಾದ ಒಂದೆರಡು ಮರಗಳನ್ನು ಕಡಿಯುವವರಿಗೆ ತೋರಿಸಿ ಕೊಟ್ಟು, ವೀರಸ್ವಾಮಿಯನ್ನು ಕಾಡಿನ ಒಳಭಾಗಕ್ಕೆ ಕರೆದುಕೊಂಡು ಹೋದ. ನಿರ್ಜನವಾದ ಪ್ರಾಂತದಲ್ಲಿ ಬಸಪ್ಪನು ವೀರಸ್ವಾಮಿಗೆ ಒಂದು ಮರವನ್ನು ತೋರಿಸಿ, "ಇದು ಉತ್ತಮೋತ್ತಮವಾದ ಮರ, ಇದರ ಸುತ್ತಳತೆ ಎಷ್ಟಿದೆಯೆಂದು ಯೆಂದು ಅಳೆದು ನೋಡಿ ಸ್ವಾಮಿ. ನನ್ನ ಲೆಕ್ಕ ಸರಿಯೋ ತಪ್ಪೋ ಅಳೆದು ಹೇಳುತ್ತೇನೆ" ಎಂದ.

ವೀರಸ್ವಾಮಿ ತನ್ನ ಎರಡು ಕೈಗಳನ್ನೂ ಮರಕ್ಕೆ ಸುತ್ತು ಹಾಕಿದ. ಬಸಪ್ಪನು ತನ್ನ ಉಡಿಯೊಳಗಿಂದ ಹಗ್ಗದ ಸುರುಳಿ ತೆಗೆದು ವೀರಸ್ವಾಮಿಯ ಎರಡು



ಕೈಗಳನ್ನೂ ಜೋಡಿಸಿ ಬಿಗಿದುಬಿಟ್ಟ. ತರುವಾಯ ಅವನು ಒಂದು ಕೋಲನ್ನು ಮರದಿಂದ ಮುರಿದುಕೊಂಡು, ತನ್ನ ಹಗೆ ತೀರುವವರೆಗೂ ವೀರಸ್ವಾಮಿಯನ್ನು ಹೊಡೆದ. ಬಳಿಕ ವೀರಸ್ವಾಮಿಯ ಜೇಬಿನೊಳಗಿನಿಂದ ಹಣದ ಚೀಲವನ್ನೆತ್ತಿ, ಅದರೊಳಗಿನಿಂದ ತನ್ನ ಬಾತುಮರಿಗಳ ಬೆಲೆಯನ್ನು ತೆಗೆದುಕೊಂಡು, "ನಾನು ಬಡಗಿಯಲ್ಲ; ಬಸಪ್ಪ, ಬಾತುಗಳ ಬಸಪ್ಪ. ನನ್ನ ಹಣವನ್ನು ಎತ್ತಿ ಹಾಕಿ ಐವತ್ತೈದು ಹೊಡೆತ ಕೊಟ್ಟಿದ್ದೀಯೇ. ಹೊಡೆತದ ಬಾಕೀ ತೀರಿತು. ಬಾತುಗಳ ಬೆಲೆ ವಸೂಲಿಗೆ ಇನ್ನೂ ಎರಡು ಬಾರಿ ಬರುತ್ತೇನೆ" ಎಂದು ಹೇಳಿ ಹೋಗಿಬಿಟ್ಟ.

ವೀರಸ್ವಾಮಿಯ ಕಡೆಯವರು ತಮ್ಮ ಒಡೆಯನನ್ನು ಬಹಳ ಹೊತ್ತು ಹುಡುಕಿ, ಕಂಡುಹಿಡಿದು, ಮನೆಗೆ ಒಯ್ದು ಸೇರಿಸಿದರು. ವೀರಸ್ವಾಮಿ ಏಟಿನಿಂದ ಗಾಯಗೊಂಡುದು ಮಾತ್ರವಲ್ಲದೆ ಭೀತಿಯಿಂದಲೂ ಕೂಡಿ ಮಂಚ ಹಿಡಿದ.

ಕೆಲವು ದಿನಗಳು ಕಳೆದ ಮೇಲೆ ವೀರಸ್ವಾಮಿ ರೋಗಿಷ್ಟನಾಗಿ ಮಂಚ ಹಿಡಿದಿರುವನೆಂದು ಬಸಪ್ಪನಿಗೆ ತಿಳಿಯಿತು. ಅವನು ವೈದ್ಯನ ಹಾಗೆ ವೇಷ ಹಾಕಿಕೊಂಡು ಊರೊಳಗಿನ ಛತ್ರಕ್ಕೆ ಬಂದು ಕುಳಿತ. ಅಲ್ಲಿ ಧನಿಕನಾದ ವೀರಸ್ವಾಮಿಯ ರೋಗವನ್ನು ಕುರಿತು ಜನರು ಮಾತಾಡಿಕೊಳ್ಳುತ್ತಿದ್ದರು. ಆಗ ಬಸಪ್ಪ ಅವರೊಂದಿಗೆ, "ನಾನು ಕ್ಷಣಮಾತ್ರದಲ್ಲಿ ಆತನ ರೋಗ ವಾಸಿಮಾಡಬಲ್ಲೆನಲ್ಲಾ ?" ಎಂದ.

ಈ ಸಮಾಚಾರ ವೀರಸ್ವಾಮಿಗೂ ತಿಳಿಯಿತು. ಅವನು ಹೊಸ ವೈದ್ಯನನ್ನು ಮನೆಗೆ ಕರೆಯಿಸಿದ. ವೈದ್ಯನನ್ನು ನೋಡಿ ವೀರಸ್ವಾಮಿ ದೀನ ಸ್ವರದಿಂದ, "ನಾನು ಮತ್ತೆ ಎದ್ದು ತಿರುಗಾಡುವೆನೇ ಆಚಾರ್ಯರೇ ?" ಎಂದು ಕೇಳಿದ.

"ಯಾಕೆ ಸ್ವಾಮಿ ತಿರುಗಲಾರಿರಿ ? ರಾಮಬಾಣದಂತಹ ಔಷಧವಿರುವಾಗ ಯಾಕೆ ಸಂದೇಹ ಪಡುವಿರಿ ?—" ಎಂದು ಹೇಳಿ ಬಸಪ್ಪ ಮನೆಯಲ್ಲಿದ್ದ ಒಬ್ಬ ಸೇವಕನ ಹತ್ತಿರ ಯಾವುದೋ ಒಂದು ಜೀನಸು ತರಲು ಹೇಳಿದ. ಅವನು ಹೋದ ಮೇಲೆ ಇನ್ನೊಂದು ಜೀನಸು ತರುವಂತೆ ಇನ್ನೊಬ್ಬನನ್ನು ಕಳುಹಿಸಿದ. ಹೀಗೆ ಅಲ್ಲಿದ್ದ ಸೇವಕರನ್ನೆಲ್ಲಾ ಕಳುಹಿಸಿದ ಮೇಲೆ, ಬಸಪ್ಪ ಮೂಲೆಯಲ್ಲಿದ್ದ ದೊಣ್ಣೆಯನ್ನು ತೆಗೆದುಕೊಂಡು, "ನಿನಗೆ ನಿಜವಾದ ಚಿಕಿತ್ಸೆ ಇದೇ. ನನ್ನನ್ನು ವೈದ್ಯನೆಂದುಕೊಂಡೆಯಾ ? ಬಾತುಗಳ ಬಸಪ್ಪ ನಾನು. ಬಾತುಗಳ ಬೆಲೆ ತೆಗೆದುಕೊಳ್ಳಲು ಎರಡನೇಸಾರಿ ಬಂದಿದ್ದೇನೆ" ಎಂದ.

ವೀರಸ್ವಾಮಿ ಕೂಗಲೇ ಇಲ್ಲ. ಭಯದಿಂದ ಬಾಯೊಣಗಿ ಕಣ್ಣು ಕತ್ತಲೆ ಕವಿದು ಸತ್ತ ಹಾಗಾಗಿಬಿಟ್ಟ. ಬಸಪ್ಪ ದೊಣ್ಣೆಯನ್ನು ಆಚೆಗೆ ಬಿಸುಟು, ಪೆಟ್ಟಿಗೆಗಳಲ್ಲಿ ಹುಡುಕಿ ಬಾತುಮರಿಗಳ ಹಣ ತೆಗೆದುಕೊಂಡು, "ಇನ್ನೊಮ್ಮೆ ಬರುತ್ತೇನೆ" ಎಂದು ಹೇಳಿ ಹೊರಟುಹೋದ.

ತರುವಾಯ ಅನೇಕ ವರ್ಷಗಳು ಕಳೆದುವು. ವೀರಸ್ವಾಮಿ ಮತ್ತೆ ಎದ್ದು ತಿರುಗುವಂತಾಗಿದ್ದ. ಅವನು ಬಾತುಗಳ ಬಸಪ್ಪನನ್ನು ಪೂರ್ತಿ ಮರೆತೂಹೋದ. ಆದರೆ ಬಸಪ್ಪನಿಗೆ ಮಾತ್ರ ಇನ್ನೊಂದುಸಾರಿ ವೀರಸ್ವಾಮಿಯನ್ನು ಕಲೆತುಕೊಳ್ಳಬೇಕೆಂದು ತೋರಿತು.

ಒಂದುದಿನ ಬೆಳಿಗ್ಗೆ ಬಸಪ್ಪ ಪಟ್ಟಣದ ವ್ಯಾಪಾರ ಸ್ಥಳಕ್ಕೆ ಹೋದ. ವೀರಸ್ವಾಮಿ ಇನ್ನೂ ಆ ಕಡೆಗೆ ಬಂದಿರಲಿಲ್ಲ. ಒಬ್ಬ ಮನುಷ್ಯ ಒಂದು ಕುದುರೆಯನ್ನು ಮಾರಲು ಎಲ್ಲರಿಗೂ ತೋರಿಸುವುದನ್ನು ಬಸಪ್ಪ ನೋಡಿದ. ಬಸಪ್ಪ ಆ ಕುದುರೆಯನ್ನು ಕುರಿತು ಕೇಳಿದಾಗ, "ಈ ಕುದುರೆಯನ್ನು ಮೀರಿ ಓಡುವಂಥ ಕುದುರೆ ಈ ದೇಶದಲ್ಲೇ ಇಲ್ಲ" ಎಂದ ಕುದುರೆಯ ಮನುಷ್ಯ.

"ನನಗೆ ಅಂತಹ ಕುದುರೆಯೇ ಬೇಕು. ನಾನು ಹೇಳಿದಂತೆ ಮಾಡಿದರೆ ನಿನ್ನ ಕುಧುರೆಯನ್ನು ನಾನು ಕೊಂಡುಕೊಳ್ಳುತ್ತೇನೆ" ಎಂದ ಬಸಪ್ಪ.

"ಏನು ಮಾಡಬೇಕು ಹೇಳು, ಮಾಡುತ್ತೇನೆ" ಎಂದ ಕುದುರೇ ಮನುಷ್ಯ.

"ಗಾಡಿಯಲ್ಲಿ ಸಾವುಕಾರ ವೀರಸ್ವಾಮಿ ಬರುತ್ತಾ ಇರುತ್ತಾನೆ. ನೀನು ಕುದುರೇ ಮೇಲೆ ಅವನ ಇದಿರಿಗೆ ಹೋಗಿ ಅವನ ಹತ್ತಿರ, ನಾನೇ ಬಾತುಗಳ ಬಸಪ್ಪ, ಎಂದು ಗಟ್ಟಿಯಾಗಿ ಹೇಳಿ ವೇಗವಾಗಿ ಬಂದುಬಿಡು. ಇಲ್ಲದಿದ್ದರೆ ಅಪಾಯದಲ್ಲಿ ಬೀಳುವಿ!" ಎಂದ ಬಸಪ್ಪ.

"ಅಷ್ಟೇತಾನೇ, ಸರಿ" ಎಂದು ಕುದುರೆ ಮಾರುವವನು ತನ್ನ ಕುದುರೆಯ ಮೇಲೆ ಹತ್ತಿ ಹೋಗಿ, ಜೋಡು ಕುದುರೆಗಳ ಗಾಡಿಯಲ್ಲಿ ಬರುತ್ತಿದ್ದ ವೀರಸ್ವಾಮಿ ಇದಿರು ಕಾಣಿಸುತ್ತಲೇ, "ನಾನೇ ಬಾತುಗಳ ಬಸಪ್ಪ!" ಎಂದು ಹೇಳಿ ಕುದುರೆಯನ್ನು ವೇಗವಾಗಿ ದೌಡಾಯಿಸಿಬಿಟ್ಟ.

ವೀರಸ್ವಾಮಿ ಆವೇಶದಿಂದ ತನ್ನ ಗಾಡಿಯನ್ನು ನಿಲ್ಲಿಸಿ, ಗಾಡಿಯ ಕುದುರೆಗಳನ್ನು ಬಿಚ್ಚಿಸಿ ತನ್ನ ಸೇವಕರೊಂದಿಗೆ, "ಅವನನ್ನು ಹಿಡಿದವರಿಗೆ ಘರದು ಚಿನ್ನದ ನಾಣ್ಯ ಕೊಡುತ್ತೇನೆ. ಬೇಗ ಓಡಿರಿ!" ಎಂದ. ವೀರಸ್ವಾಮಿಯ ಸೇವಕರು ಗಾಡಿಯ ಕುದುರೆಗಳ ಮೇಲೇರಿ ದೌಡಾಯಿಸಿಕೊಂಡು ಓಡಿದರು. ವೀರಸ್ವಾಮಿ ಒಬ್ಬನೇ ಗಾಡಿಯಲ್ಲಿದ್ದ.

ಆಗ ಬಸಪ್ಪ ವೀರಸ್ವಾಮಿಯ ಬಳಿಗೆ ಹೋಗಿ, "ಬಾತುಗಳ ಬಸಪ್ಪ, ಅವನಲ್ಲ, ನಾನು!" ಎಂದ.

ವೀರಸ್ವಾಮಿ ಭಯದಿಂದ ಮರಗಟ್ಟಿ ಹೋದ. ಬಸಪ್ಪ ಅವನ ಜೇಬಿನೊಳಗೆ ಕೈಹಾಕಿ ಹಣದ ಚೀಲ ತೆಗೆದು ಕೊಡು, "ಇನ್ನು ನಿನ್ನ ಹತ್ತಿರ ನನ್ನ ಕೆಲಸ ಮುಗಿಯಿತು" ಎಂದು ಹೇಳಿ ಹೊರಟುಹೋದ. ತರುವಾಯ ಎಂದಿಗೂ ವೀರಸ್ವಾಮಿಯ ಮುಂದೆ ಅವನು ಕಾಣಿಸಲಿಲ್ಲ.





# ಅಬೂಕೀರ್ ಅಬೂಸೀರ್

೬

"ಇನ್ನು ಮೇಲೆ ನಗರ ವಾಸಿಗಳೆಲ್ಲರೂ ನಗರದಲ್ಲಿ ಕಟ್ಟಲಾದ ಮಹಾಸ್ನಾನಶಾಲೆಗೆ ಬಂದು ಸ್ನಾನಮಾಡಿ ಹೋಗಬಹುದು. ಮೂರು ದಿನಗಳವರೆಗೆ ಸ್ನಾನಗಳು ಉಚಿತ" ಎಂದು ಅಬೂಸೀರ್ ನಗರದೊಳಗೆಲ್ಲಾ ಡಂಗುರ ಸಾರಿ ಪ್ರಚುರಪಡಿಸಿದನು. ಮನೆಯಿಂದ ಮನೆಗೆ ಈ ಸಂತೋಷದ ಸಮಾಚಾರ ಹರಡಿತು. ಎಲ್ಲರ ಬಾಯಿಯಲ್ಲಿಯೂ ಸ್ನಾನದ ಮನೆಯ ಮಾತೇ ಮಾತು.

ಅಂತೆಯೇ ಸ್ನಾನಶಾಲೆಯ ಬಳಿಯಲ್ಲಿ ಜನರು ತಂಡೋಪತಂಡವಾಗಿ ಗುಂಪುಗೂಡ ತೊಡಗಿದರು. ಎಲ್ಲರೂ ಸ್ನಾನಮಾಡಿ ಹೊಸ ಬಗೆಯ ಸಂತೋಷದ ಅನುಭವದೊಂದಿಗೆ ಹಿಂದಿರುಗುತ್ತಿದ್ದರು. ಮೂರು ದಿನಗಳವರೆಗೆ ಅಬೂಸೀರ್ ಯಾರ ಕೈಯಿಂದಲೂ ಹಣ ವಸೂಲು ಮಾಡಲಿಲ್ಲ. ನಾಲ್ಕನೇ ದಿನದಿಂದ ಅವನು ಸ್ನಾನಶಾಲೆಯ ದ್ವಾರದ ಬಳಿಯಲ್ಲಿ ಹುಂಡಿ ಮುನ್ನಿಟ್ಟು ಕುಳಿತುಕೊಂಡು, ಸ್ನಾನಮಾಡಿ ಹಿಂದಿರುಗಿ ಹೋಗುವವರು ಎಷ್ಟು ಕೊಡಲು ಸಾಧ್ಯವೋ ಅಷ್ಟನ್ನು ವಸೂಲು ಮಾಡಲು ತೊಡಗಿದನು. ಸಾಯಂಕಾಲವಾಗುವಷ್ಟರಲ್ಲಿ ಅವನ ಹುಂಡೀ ತುಂಬಿ ಹೋಯಿತು. ಈ ವಿಧವಾಗಿ ಅಬೂಸೀರ್ ಕೆಲವೇ ದಿನಗಳಲ್ಲಿ ಭಾರೀ ಧನಿಕನಾದನು.

ಸ್ನಾನಶಾಲೆ ಪ್ರಾರಂಭವಾದ ಕೆಲವು ದಿನಗಳ ಮೇಲೆ ಮಹಾರಾಣಿ, ತನ್ನ ಗಂಡನು ಸ್ನಾನದ ಸುಖ ಸೌಕರ್ಯಗಳನ್ನು ಕುರಿತು ಒಂದೇಸಮನೆ ಮೆಚ್ಚಿಕೊಳ್ಳುವುದನ್ನು ನೋಡಿ, ತಾನು ಕೂಡಾ ಅಲ್ಲಿಗೆ ಹೋಗಿ ಸ್ನಾನ ಮಾಡಿ ಬರಬೇಕೆಂದು ನಿಶ್ಚಯಿಸಿದಳು. ಈ ಸಮಾಚಾರ ಅಬೂಸೀರ್‌ಗೂ ತಿಳಿಯಿತು. ಆ ಕೂಡಲೇ ಅವನು ಸ್ನಾನಶಾಲೆಯಲ್ಲಿ ಬೆಳಗ್ಗೆ ಗಂಡುಸರೂ, ಸಾಯಂಕಾಲ ಹೆಂಗುಸರೂ ಸ್ನಾನ ಮಾಡಲು ವ್ಯವಸ್ಥೆ ಮಾಡಿಟ್ಟನು. ಸ್ತ್ರೀಯರು ಕೊಡುವ ಹಣವನ್ನು ವಸೂಲು ಮಾಡಲಿಕ್ಕಾಗಿ ಅವನು ಗೌರವಸ್ಥಳಾದ ಒಬ್ಬಳು ಸ್ತ್ರೀಯನ್ನು ನಿಯಮಿಸಿದನು. ಸ್ತ್ರೀ ಪರಿಚಾರಿಕೆಯರನ್ನೂ ಇಡಿಸಿದನು. ಇದರಿಂದ ಅವನ ಸ್ನಾನ ಶಾಲೆಗೆ ಇನ್ನಷ್ಟು ಗೌರವವೂ ಕಳೆಯೂ ಬಂದಿತು. ಮಹಾರಾಣಿ ಒಂದುಸಾರಿ ಅಲ್ಲಿಗೆ ಬಂದು ಸ್ನಾನಮಾಡಿ ಅದರ



ಸೊಗಸನ್ನು ಅನುಭವಿಸಿದ ಮೇಲೆ, ಪ್ರತಿಶುಕ್ರವಾರ ಸಾಯಂಕಾಲವೂ ಬಂದು ಅಲ್ಲಿ ಸ್ನಾನ ಮಾಡಲು ನಿರ್ಣಯಿಸಿಕೊಂಡಳು. ರಾಜನು ಪ್ರತಿ ಶುಕ್ರವಾರ ಬೆಳಗ್ಗೆ ಸ್ನಾನಮಾಡಿ ಹೋಗುತ್ತ ಸಾವಿರ ದೀನಾರಗಳನ್ನು ಕೊಡುವಂತೆ, ರಾಣಿ ಕೂಡಾ ಪ್ರತಿ ಶುಕ್ರವಾರ ಸಾಯಂಕಾಲವೂ ಬಂದು ಸ್ನಾನಮಾಡಿ ಸಾವಿರ ದೀನಾರ ಕೊಟ್ಟು ಹೋಗುತ್ತಿದ್ದಳು.

ದಿನದಿಂದ ದಿನಕ್ಕೆ ಅಬೂಸೀರನ ಐಶ್ವರ್ಯವೂ, ಗೌರವವೂ, ಕೀರ್ತಿಯೂ ಹೆಚ್ಚುತ್ತಾ ಹೋಗುತ್ತಿದ್ದುವು. ಆದರೆ ಅವನ ಮಟ್ಟಿಗೆ ಅವನು ಮೊದಲಿನ ವಿನಯವಿಧೇಯತೆ ವಿಶ್ವಾಸಗಳುಳ್ಳ ಅಬೂಸೀರನಾಗಿಯೇ ಇದ್ದನು. ಅವನ ಮನಸ್ಸು ಒಂದಿಷ್ಟೂ ಬದಲಾವಣೆ ಹೊಂದಲಿಲ್ಲ. ಅವನ ಸೌಜನ್ಯವೂ, ಬಡವರ ಮೇಲಿನ ದಯೆಯೂ ಅವನ ಸಂಪತ್ತುಗಳ ಬುನಾದಿಯಾಗಿ ಹಾಗೇ ಇದ್ದುವು. ಬಡವರ ಕೈಯಿಂದ ಎಂದಿಗೂ ಹಣ ತೆಗೆದುಕೊಂಡವನಲ್ಲ. ಕಟ್ಟಕಡೆಯಲ್ಲಿ ಅವನ ಒಳ್ಳೆಯತನವೇ ಅವನನ್ನು ಹೇಗೆ ಪ್ರಾಣಾಪಾಯದಿಂದ ಕಾಪಾಡಿತೆಂಬ ಸಂಗತಿಯನ್ನು ಮುಂದೆ ಮುಂದೆ ತಿಳಿಯಬಹುದು. ಅದಕ್ಕೆ ಕಾರಣ ಅವನ ಗೆಳೆಯನೇ.

ಅಬೂಸೀರ್ ನಡೆಯಿಸುವ ಸ್ನಾನಶಾಲೆಯನ್ನು ಕುರಿತು ರಂಗಾರೀ ಅಬೂಕೀರ್ ಕೂಡಾ ಕೇಳಿದನು. ಅದೊಂದು ಭೂಲೋಕದ ಸ್ವರ್ಗವೆಂದು ಅನೇಕರು ಹೊಗಳುವುದು ಅವನ ಕಿವಿಗೆ ಬಿತ್ತು. ಹಾಗಾದರೆ ತಾನೂ ಒಮ್ಮೆ ಅಲ್ಲಿಗೆ ಹೋಗಿ ಅದೇನು ಸುಖವೋ ಅನುಭವಿಸಬೇಕೆಂದು ಅವನಿಗೆ ತೋರಿತು. ಅವನು ಒಳ್ಳೆಯ ದುಸ್ತುಗಳನ್ನು ಧರಿಸಿಕೊಂಡು, ತನ್ನ ಹೇಸರಗತ್ತೆಯ ಮೇಲೆ ಕುಳಿತುಕೊಂಡು, ತನ್ನ ಪರಿವಾರದೊಂದಿಗೆ, ಸ್ನಾನಶಾಲೆಗೆ ಹೊರಟನು. ಭವ್ಯ ವೇಷದಲ್ಲಿರುವ ಅವನ ಹಿಂದೆ ಗುಲಾಮರು ಬೆತ್ತಗಳನ್ನು ಹಿಡಿದುಕೊಂಡು ನಡೆದರು.

ಸ್ನಾನಶಾಲೆಯೊಳಗೆ ಅಡಿಯಿಟ್ಟ ಕೂಡಲೇ ಅಗರು ಚಂದನಗಳ ಸುವಾಸನೆ ಗಮ್ಮನೆ ಮೂಗಿನೊಳಗೆ ಸೇರಿತು. ಅಗಣಿತ ಜನರು ಒಳಗೆ ಹೋಗುತ್ತಿದ್ದರು, ಹೊರಗೆ ಬರುತ್ತಿದ್ದರು. ಅವನ ಹಳೆಯ ಸ್ನೇಹಿತ ಕಿರುನಗೆ ಸೂಸುತ್ತ ಹುಂಡೀ ಹತ್ತಿರ ಕುಳಿತಿರುವುದನ್ನು ನೋಡಿದನು. ಈಗ ಅಬೂಸೀರ್ ಮೈತುಂಬಿಕೊಂಡವನಾಗಿದ್ದುದರಿಂದ ಅಬೂಕೀರನಿಗೆ ಬೇಗನೇ ಅವನ ಗುರುತು ಹತ್ತಲಿಲ್ಲ. ಗುರುತು ಹತ್ತಿದ ಕೂಡಲೇ ಅವನಲ್ಲಿದ್ದ ಭಾವನೆ ಈರ್ಷ್ಯೆಯೇ! ಆದರೂ ಅವನು ಮೇಲೆ ಸಂತೋಷವನ್ನು ವ್ಯಕ್ತಪಡಿಸುತ್ತ, ಅಬೂಸೀರನ ಬಳಿಗೆ ಹೋಗಿ, "ಎಂತಹ ಕೆಲಸ ಮಾಡಿದೆಯಲ್ಲಾ ಮಿತ್ರಾ! ಬುದ್ಧಿವಂತನಾದವನು ಹೀಗೆ ಮಾಡಬಹುದೇನಯ್ಯಾ? ನಾನು ಈ ನಗರದಲ್ಲಿ ಆಸ್ಥಾನದ ರಂಗಾರಿಯಾಗಿರುವ ಸಂಗತಿ ನಿನಗೆ ಗೊತ್ತಿಲ್ಲವೆ? ಯಾಕೆ ನೀನು ನನ್ನನ್ನು ನೋಡಲು ಬರಲಿಲ್ಲ? ನಿನ್ನ ಈ ಹಳೆಯ ಸ್ನೇಹಿತ ಏನಾದನೆಂದು

ಸ್ವಲ್ಪವಾದರೂ ವಿಚಾರಿಸಿದೆಯಾ ? ನಾನು ನಿನಗಾಗಿ ಆಳುಗಳನ್ನು ಕಳಿಸಿ ಊರೆಲ್ಲಾ ಎಷ್ಟು ಹುಡುಕಿಸಿದೆ ! ನಿನ್ನ ಜಾಡೇ ದೊರಕಲಿಲ್ಲ !" ಎಂದನು.

ಅಬೂಸೀರ್ ವಿಚಾರದಿಂದ ತಲೆಯಾಡಿಸುತ್ತ, "ಅಬೂಸೀರ್, ನಾನು ನಿನ್ನ ರಂಗಾರೀ ಕಾರ್ಖಾನೆಗೆ ಬಂದಾಗ ನನ್ನನ್ನು ಸಾಯುವ ಹಾಗೆ ಹೊಡೆದು ಅವಮಾನಪಡಿಸಿ ಕಳ್ಳಗಿಳ್ಳ ಅಂತ ಕೂಗಿದುದನ್ನೆಲ್ಲಾ ಮರೆತೆಯಾ ?" ಎಂದು ಕೇಳಿದ.

ಅಬೂಕೀರ್ ಆಶ್ಚರ್ಯವನ್ನು ನಟಿಸುತ್ತ, "ಏನು ಹೇಳುವಿ ನೀನು ? ನಾನು ನಿನ್ನನ್ನೋ ಹೊಡೆದೆ ? ಎಲ್ಲಿ ಬೇಕಾದರೂ ಪ್ರಮಾಣ ಮಾಡುತ್ತೇನೆ. ನಾನು ನಿನ್ನನ್ನು ಗುರುತಿಸಲೇ ಇಲ್ಲ. ಒಬ್ಬ ಕಳ್ಳ ಆಗಾಗ ಬಂದು ಬಟ್ಟೆಗಳನ್ನು ಕದ್ದುಕೊಂಡು ಹೋಗುತ್ತಿದ್ದ. ನಿನ್ನನ್ನು ನೋಡಿ ಅವನೇ ಅಂದುಕೊಂಡೆನಪ್ಪಾ. ನೀನು ಗುರುತು ಸಿಕ್ಕದಷ್ಟು ಮಟ್ಟಿಗೆ ಹೈರಾಣಾಗಿ ಹೋದೆ. ಅಯ್ಯೋ ! ಎಲ್ಲಾ ಅಲ್ಲಾ ಮಹಿಮೆ ! ಆದರೂ ಸ್ವಲ್ಪ ತಪ್ಪು ನಿನ್ನದೂ ಇದೆ. ನನ್ನನ್ನು ನೋಡಿದ ಕೂಡಲೇ ನೀನು ಹೆಸರು ಹೇಳಿರಬೇಕಿತ್ತು. ಅದರ ಮೇಲೆ ನಾನು ಆ ದಿನ ಬಹಳ ಕೋಪದಲ್ಲಿಯೂ ಇದ್ದೆ. ಈ ತಪ್ಪು ನೀನು ಕ್ಷಮಿಸಲೇಬೇಕು " ಎಂದನು.

"ಸರಿ. ಆಗಿಹೋದ ಮಾತಿಗೇನು ಬಿಡು. ಒಳಗೆ ಬಾ. ಬಟ್ಟೆಗಿಟ್ಟೆ ಬಿಚ್ಚಿ ಸ್ನಾನಮಾಡು" ಎಂದು ಅಬೂಸೀರ್ ಅಬೂಕೀರನಿಗೆ ಹೇಳಿದ.

"ಆದರೆ ಅಣ್ಣಾ, ನಿನಗೆ ಇಂಥಾ ದಶೆ ಹೇಗೆ ಹತ್ತಿಕೊಂಡಿತು ?" ಎಂದು ಕೇಳಿದ ಅಬೂಕೀರ್.

"ನಿನ್ನನ್ನು ಮೇಲಕ್ಕೆ ತಂದವನೇ ನನ್ನನ್ನೂ ಮೇಲಕ್ಕೆ ಎಳೆದ" ಎಂದು ಅಬೂಸೀರ್ ತನ್ನ ಹೆಚ್ಚಿನ ಸಮಾಚಾರಗಳನ್ನೆಲ್ಲಾ ಗೆಳೆಯನೊಂದಿಗೆ ಹೇಳಿದ. ಎಲ್ಲವನ್ನೂ ಕೇಳಿದ ಮೇಲೆ ಅಬೂಕೀರ್ ಗೆಳೆಯನ ಬೆನ್ನು ತಟ್ಟುತ್ತ, "ರಾಜನ ಅನುಗ್ರಹ



ನಿನ್ನ ಮೇಲೆ ಬೀಳುವುದೆಂದರೆ ಎಂತಹ ಅದೃಷ್ಟವಪ್ಪಾ ! ಇನ್ನೀಗ ನನ್ನ ಸ್ನೇಹಿತನೆಂದು ಹೇಳಿಬಿಟ್ಟರೆ ರಾಜರಿಗೆ ನಿನ್ನ ಮೇಲಿರುವ ಅಭಿಮಾನ ಎರಡು ಪಾಲು ಹೆಚ್ಚುತ್ತೆ " ಎಂದನು.

"ನಮ್ಮ ಕೈಯಲ್ಲಿ ಹೆಚ್ಚೇನಿದೆ ಹೇಳು ? ನಿಗ್ರಹ ಅನುಗ್ರಹಗಳೆರಡೂ ಅಲ್ಲಾನ ಕೈಯೊಳಗಿವೆ. ನೀನು ಮೊದಲು ಬಟ್ಟೆ ತೆಗೆದಿಟ್ಟು ಸ್ನಾನಮಾಡು " ಎಂದ ಅಬೂಸೀರ್. ಅವನು ತಾನೇ ಸ್ವಯಂ ಅಬೂಕೀರನ ಶರೀರವನ್ನು ಹಿಡಿದು ಸ್ನಾನಮಾಡಿಸಿದನು. ತರುವಾಯ ಅವನಿಗೆ ಕುಡಿಯಲು ಷರ್ಬತ್ತನ್ನು ತಾನೇ ತಯಾರಿಸಿ ಕೊಟ್ಟನು. ಈ ಕೆಲಸಗಳನ್ನು ಅಬೂಸೀರ್ ಮಹಾರಾಜರಿಗೆ ಹೊರತು ಬೇರೆ ಯಾರಿಗೂ ಮಾಡುತ್ತಿದ್ದಿಲ್ಲ. ಆದುದರಿಂದ ಸ್ನಾನಕ್ಕೆ ಬಂದಿದ್ದ ಇತರರು ರಂಗಾರೀಗೆ ನಡೆಯುವ ಉಪಚಾರಗಳನ್ನು ಕಂಡು ದಂಗಾಗಿ ಹೋದರು. ಎಲ್ಲಾ ಆದ ಮೇಲೆ ಅಲ್ಲಿಂದ ಹೊರಟು ಹೋಗುವಾಗ ಅಬೂಕೀರ್ ಹಣ



ಕೊಡಲು ಹೋದನು. ಆದರೆ ಅಬೂಸೀರ್ ಅವನಿಂದ ಹಣ ತೆಗೆದುಕೊಳ್ಳದೆ, "ಏನೆಂದುಕೊಂಡು ನನಗೆ ಹಣ ಕೊಡುವೆ? ಸ್ನೇಹಿತರ ನಡುವೆ ಈ ಭೇದವಿರಬಹುದೇ? ಮುಚ್ಚಿಕೋ ನಿನ್ನ ಹಣದ ಚೀಲ. ನೀನೂ ನಾನೂ ಒಂದೇ ದೇಶದಿಂದ ನಿರ್ಗತಿಕರಾಗಿ ಹೊರಟು ಬಂದವರೆಂಬುದನ್ನು ಎಂದಿಗೂ ಮರೆಯಬೇಡ" ಎಂದನು.

"ಸರಿ. ನಿನ್ನ ಇಷ್ಟ. ನೀನು ನನಗೆ ಆದರಣೆ ತೋರಿಸಿದುದಕ್ಕಾಗಿ ನಾನು ನಿನಗೆ ಒಂದು ಸಲಹೆ ಕೊಡುತ್ತೇನೆ. ನಿನ್ನ ಸ್ನಾನಶಾಲೆ ಎಲ್ಲಾ ವಿಧದಲ್ಲಿಯೂ ದಿವ್ಯವಾಗಿದೆ ನಿಜವೇ. ಆದರೆ ಒಂದು ಕೊರತೆ ಇದೆ. ಮತ್ತೇನಿಲ್ಲ. ಇಲ್ಲಿ ಕೂದಲು ಉದುರಿಹೋಗುವ ಸ್ನಾನದ ಹಿಟ್ಟು ಕಾಣುವುದಿಲ್ಲ. ಅದು ಇಲ್ಲದಿರುವುದು ಒಂದು ಲೋಪವೆಂದೇ ಹೇಳಬೇಕು. ಅದನ್ನು ಹೇಗೆ ತಯಾರಿಸಬೇಕೆಂದರೆ ಶಂಖಪಾಷಾಣವನ್ನೂ, ಸುಣ್ಣವನ್ನೂ ಬೆರೆಸಿ ಅರೆದು ಎಣ್ಣೆಯಿಂದ ಕಲಸಿ ಮುದ್ದೆ ಮಾಡಬೇಕು. ಅದು ದುರ್ವಾಸನೆ ಹೊಡೆಯದಂತೆ ಅದರಲ್ಲಿ ಕಸ್ತೂರಿಯನ್ನೂ ಬೆರೆಯಿಸಬೇಕು. ಅದನ್ನು ಮಹಾರಾಜರಿಗೆ ಹಚ್ಚಿ ತೋರಿಸಿದೆಯೆಂದರೆ ಮಿತಿಯಿಲ್ಲದಷ್ಟು ಸಂತೋಷಪಡುತ್ತಾರೆ. ಆ ಹಿಟ್ಟಿನಿಂದ ತಿಕ್ಕಿ ಉಜ್ಜಿದ ತರುವಾಯ ಚರ್ಮವು ಸ್ವಚ್ಛವಾಗಿಯೂ, ನುಣ್ಣಗಾಗಿಯೂ ಪ್ರಕಾಶಿಸುತ್ತದೆ" ಎಂದ ಅಬೂಕೀರ್.

ಅಬೂಸೀರ್ ಅವನು ಹೇಳಿದುದನ್ನೆಲ್ಲಾ ಬರೆದುಕೊಂಡು ಆಗಲೇ ಅದನ್ನು ತಯಾರಿಸುವ ಏರ್ಪಾಡು ಮಾಡಿದನು. ಅದನ್ನು ನೋಡಿ ಅಬೂಕೀರ್ ತೃಪ್ತಿಯಿಂದ ಹೊರಟು ಹೋದನು. ಆದರೆ ಅವನು ತನ್ನ ಪಾಡಿಗೆ ಹೋಗಿಬಿಡಲಿಲ್ಲ. ಅಲ್ಲಿಂದ ಹೊರಟ ದುಷ್ಟ ಅಬೂಕೀರ್ ನೆಟ್ಟಗೆ ಮಹಾರಾಜನ ಬಳಿಗೆ ಹೋಗಿ, "ಮಹಾಪ್ರಭುಗಳೇ, ನನಗೆ ತಿಳಿದುಬಂದ ವಿಷಯದಲ್ಲಿ, ತಮಗೆ ಎಚ್ಚರಿಕೆ ಕೊಡಬೇಕೆಂದು ಬಂದಿದ್ದೇನೆ" ಎಂದು ಬಹಳ ಭೀತನಂತೆ ಹೇಳಿದನು.

"ಏನು ಆ ಎಚ್ಚರಿಕೆ?" ಎಂದು ಕೇಳಿದ ರಾಜ.

"ಅಲ್ಲಾನ ಕಟಾಕ್ಷವಿದ್ದುದರಿಂದಲೇ ಭಯಂಕರನಾದ ವೈರಿಯೊಬ್ಬ ಈವರೆಗೂ ಯಾವ ಕೇಡೂ ಮಾಡಲಾರದೆ ಹೋದನೆನ್ನಬೇಕು. ಇಲ್ಲಿ ಅಬೂಸೀರ್ ಎಂಬೊಬ್ಬ ಪರದೇಶದ ಮನುಷ್ಯ ಪ್ರಭುಗಳ ಪ್ರಾಣಕ್ಕೂ ರಾಜ್ಯಕ್ಕೂ ಕೂಡಾ ಎಸರಿಡಲು ನೋಡುತ್ತಿದ್ದಾನೆ" ಎಂದ ಅಬೂಕೀರ್.

"ಏನು ಮಾಡುತ್ತಾನೆ ಅವನು?" ಎಂದು ಆತುರದಿಂದ ಕೇಳಿದ ರಾಜ.

"ಮಹಾರಾಜರೆ, ಈ ಸಾರಿ ತಾವು ಸ್ನಾನಶಾಲೆಗೆ ಹೋದಾಗ, ಅಲ್ಲಿಂದ ಪ್ರಾಣ ಉಳಿಸಿಕೊಂಡು ಹೊರಬೀಳುವುದು ಅನುಮಾನವಾಗಿದೆ. ಅಷ್ಟರವರೆಗೆ ಪರಿಸ್ಥಿತಿ ಬೆಳೆದುಬಿಟ್ಟಿದೆ" ಎಂದ ಅಬೂಕೀರ್.

"ಏಕೆ?" ಎಂದು ರಾಜನು ಕೇಳಲು, ಅಬೂಕೀರ್ ನಡುಕವನ್ನು ನಟಿಸುತ್ತಾ, "ವಿಷ! ಘೋರ ವಿಷ!

ಶಂಖ ಪಾಷಾಣ ಮತ್ತು ಸುಣ್ಣವನ್ನು ಕೂಡಿಸಿ ಅರೆದು, ಅದರಿಂದ ನಿಮ್ಮ ಶರೀರದ ಮುಖ್ಯ ಅಂಗಗಳಿಗೆ ರುದ್ದಲು ನೋಡುತ್ತಾನೆ. ಆ ಹಿಟ್ಟಿನಿಂದ ಶರೀರದಲ್ಲಿಯ ರೋಮಗಳೆಲ್ಲಾ ಉದುರಿ ಹೋಗುತ್ತವೆಂದೂ, ಚರ್ಮ ನುಣುಪಾಗಿ ಪ್ರಕಾಶಿಸುತ್ತದೆಂದೂ ಅವನು ನಿಮ್ಮೊಂದಿಗೆ ಹೇಳುತ್ತಾನೆ. ಆದರೆ ಆ ಹಿಟ್ಟು ಶರೀರಕ್ಕೆ ತಾಗಿದ ಕೂಡಲೇ ಭಗ್ಗನೆ ಉರಿ ಹತ್ತಿಕೊಳ್ಳುತ್ತದೆ. ಅಯ್ಯೋ! ಅದಕ್ಕಿಂತಲೂ ನೋವು ಅನುಭವಿಸುವಂಥ ಮರಣ ಬೇರೊಂದಿಲ್ಲ. ಪ್ರಭುಗಳೇ, ಅಬೂಸೀರ್ ನಿಮ್ಮ ಶತ್ರು ರಾಜರ ಗೂಢಚಾರ. ತಮ್ಮ ಪ್ರಾಣವನ್ನು ತೆಗೆಯಬೇಕೆಂತಲೇ ಅವನನ್ನು ಕಳಿಸಿದ್ದಾರೆ. ನಾನು ನಿಮ್ಮ ಉಪ್ಪನ್ನು ತುಂಬ ತಿಂದಿರುವೆನಾದುದರಿಂದ, ಈ ಗುಟ್ಟು ತಿಳಿದ ಕೂಡಲೇ ತಮ್ಮನ್ನು ಎಚ್ಚರಿಸಬೇಕೆಂದು ನಿಂತ ಕಾಲಲ್ಲೇ ಓಡುತ್ತಾ ಬಂದೆ. ಇದರ ಪರಿಹಾರಕ್ಕೆ ಕೂಡಲೇ ತಕ್ಕ ಏರ್ಪಾಡು ಮಾಡಿಸಿರಿ ಪ್ರಭೂ" ಎಂದು ಹೇಳಿ ಬಾಯಿ ಮುಚ್ಚಿದನು.

ಅಬೂಕೀರ್ ಹೇಳಿದ ಸುಳ್ಳುಗಳಲ್ಲಿ ರಾಜನಿಗೆ ಗುರಿ ನಿಂತಿತು. ಅಷ್ಟೇ ಅಲ್ಲ, ಭಯವೂ ಉಂಟಾಯಿತು. ಅವನು ಅಬೂಕೀರನನ್ನು ಕುರಿತು, "ಈ ಸಂಗತಿಯನ್ನು ಯಾರಿಗೂ ಹೇಳಿಬಿಡಬೇಡ. ಗುಟ್ಟಾಗಿ ಇಟ್ಟುಕೋ. ನಾನು ಈಗಲೇ ಮಂತ್ರಿಯೊಂದಿಗೆ ಸ್ನಾನಶಾಲೆಗೆ ಹೋಗಿ, ನೀನು ಹೇಳಿದ ಮಾತು ನಿಜವೋ ಸುಳ್ಳೋ ತಿಳಿದುಕೊಂಡು ಮಾಡಬೇಕಾದುದನ್ನು ಮಾಡುತ್ತೇನೆ" ಎಂದನು.

ಅದರಂತೆ ರಾಜನೂ ಮಂತ್ರಿಯೂ ಸ್ನಾನಶಾಲೆಗೆ ಹೋಗಿ ತಲಪಿದಾಗ ಅಬೂಸೀರ್ ರಾಜನ ಮುಂದೆ ವಿನಯದಿಂದ, "ಮಹಾಪ್ರಭುಗಳೇ. ಈ ದಿನ ಹೊಸ ಬಗೆಯ ಒಂದು ಸ್ನಾನದ ಹಿಟ್ಟು ತಯಾರಿಸಿದ್ದೇನೆ. ಅದು ಕೂದಲನ್ನು ಸುಲಭವಾಗಿ ಉದುರಿಸಿಬಿಡುತ್ತದೆ. ಕತ್ತಿಯಿಂದ ಕ್ಷೌರ ಮಾಡುವ ಅಗತ್ಯವೇ



ಇರುವುದಿಲ್ಲ. ಈ ಹಿಟ್ಟನ್ನು ತಮಗಾಗಿಯೇ ಪ್ರತ್ಯೇಕವಾಗಿ ತಯಾರಿಸಿದ್ದೇನೆ" ಎಂದ.

"ಎಲ್ಲಿ? ಅದನ್ನು ಮೊದಲು ಮಂತ್ರಿಯ ಮೇಲೆ ಉಪಯೋಗಿಸು, ನೋಡೋಣ" ಎಂದ ರಾಜ.

ಅಬೂಸೀರ್ ತಾನು ತಯಾರಿಸಿದ ಹಿಟ್ಟನ್ನು ತೆಗೆದು ಮಂತ್ರಿಯ ಕಾಲಿನ ಮೇಲೆ ಹಾಕಿ ಸ್ವಲ್ಪ ತಿಕ್ಕಿದ. ಅದು ಹಚ್ಚಿದಷ್ಟು ಜಾಗದಲ್ಲಿದ್ದ ರೋಮಗಳು ಉದುರಿ ಸಫಾಯಿಯಾಯಿತು.

ಇದನ್ನು ನೋಡಿದ ಕೂಡಲೇ ಆ ಹಿಟ್ಟು ಮಹಾನಾಶಕಾರೀ ಶಕ್ತಿಯುಳ್ಳ ಕ್ರೂರ ವಿಷವೆಂಬುದರಲ್ಲಿ ರಾಜನಿಗೆ ನಂಬುಗೆ ಉಂಟಾಯಿತು. ಕೂಡಲೇ ಅವನು ತನ್ನ ಭಟರಿಗೆ "ಈ ಕೊಲೆಪಾತಕನನ್ನು ಹಿಡಿದು ಕಟ್ಟಿ" ಎಂದು ಆಜ್ಞೆಮಾಡಿದನು.

ರಾಜನೂ ಮಂತ್ರಿಯೂ ಅಬೂಸೀರನನ್ನು ಹಿಂಗಟ್ಟು ಮುರಿಗಟ್ಟಿ ರಾಜಭವನಕ್ಕೆ ಎಳೆದೊಯ್ಯಿಸಿದರು. ತನ್ನನ್ನು ಏಕೆ ಹೀಗೆ ಮಾಡಿಸುವರೆಂಬುದು

ಅಬೂಸೀರನಿಗೆ ಅರ್ಥವಾಗಲಿಲ್ಲ. ರಾಜನು ವಿಚಾರಣೆಗೆ ಅವಕಾಶ ಕೊಡದೆ ರೇವಿನ ಅಧಿಕಾರಿಯನ್ನು ಕರೆಯಿಸಿ, ಅವನೊಂದಿಗೆ, "ಈ ರಾಜದ್ರೋಹಿಯನ್ನು ಕರೆದುಕೊಂಡು ಹೋಗಿ, ಸುಟ್ಟಸುಣ್ಣದ ಚಿಪ್ಪಿನೊಂದಿಗೆ ಗೋಣೀಚೀಲದಲ್ಲಿ ಕಟ್ಟಿ, ನನ್ನ ಕಿಟಕಿಗೆ ಕಾಣಿಸುವ ಹಾಗೆ ಇವನನ್ನು ಸಮುದ್ರದಲ್ಲಿ ಹಾಕಿಬಿಡು. ಹಾಗೆ ಸತ್ತರೇನೇ ಇವನಿಗೆ ನೀರಿನೊಂದಿಗೂ ಬೆಂಕಿಯೊಂದಿಗೂ ಸೇರಿ ಸಾವು ಬಂದ ಹಾಗಾಗುತ್ತದೆ" ಎಂದು ಆಜ್ಞೆ ಮಾಡಿದನು.

"ಚಿತ್ತ ಮಹಾಪ್ರಭು!" ಎಂದು ರೇವಿನ ಅಧಿಕಾರಿ ಅಬೂಸೀರನನ್ನು ಚಿಕ್ಕ ದೋಣಿಯಲ್ಲಿ ಏರಿಸಿಕೊಂಡು ಸಮುದ್ರದಲ್ಲಿ ಸಾಗಿಸಿಕೊಂಡು ಹೋದನು.

ಈ ರೇವಿನ ಅಧಿಕಾರಿ ಸ್ವಲ್ಪ ಕಾಲದ ಕೆಳಗೆ ಹಡಗಗಳ ಸರಂಗನಾಗಿದ್ದ. ಆಗ ಅವನು ಸ್ನಾನಶಾಲೆಗೆ ಬಂದಾಗ, ಅವನ ಹತ್ತಿರ ಹಣವಿಲ್ಲದುದನ್ನು ತಿಳಿದು ಅಬೂಸೀರ್ ಅವನಿಗೆ ಉಚಿತವಾಗಿ ಸೊಗಸಾದ ಸ್ನಾನವನ್ನು ಮಾಡಿಸಿ ಕಳುಹಿಸಿದ್ದನು. ಆ ಕೃತಜ್ಞತೆಯನ್ನು ಮನಸ್ಸಿನಲ್ಲಿಟ್ಟುಕೊಂಡು ರೇವಿನ ಅಧಿಕಾರಿ ಅಬೂಸೀರನನ್ನು ದೋಣಿಯಲ್ಲಿ ಚಿಕ್ಕದೊಂದು ದ್ವೀಪಕ್ಕೆ ಕರೆದುಕೊಂಡು ಹೋಗಿ, "ಅಯ್ಯಾ, ನಾನು ನಿನ್ನ ಆದರಣೆಯ ಗುಣವನ್ನು ಎಂದೂ ಮರೆಯಲಾರೆ. ಈಗ ನಾನು ನಿನಗೆ ಪ್ರತ್ಯುಪಕಾರ ಮಾಡುತ್ತೇನೆ. ರಾಜರಿಗೆ ಯಾವ ವಿಧವಾದ ದ್ರೋಹ ಬಗೆದುದರಿಂದ ನಿನಗೆ ಈ ಬಗೆಯ ಭಯಂಕರ ಮರಣದಂಡನೆ ದೊರೆಯಿತು? ನಿಜ ಸಂಗತಿ ನನ್ನ ಹತ್ತಿರ ಹೇಳು" ಎಂದು ವಿಚಾರಿಸಿದನು.

"ಅಣ್ಣಾ, ದೇವರ ಸಾಕ್ಷಿಯಾಗಿ ಹೇಳುತ್ತೇನೆ. ನಾನು ಯಾವ ವಿಧವಾಧ ತಪ್ಪನ್ನೂ ಮಾಡಿದವನಲ್ಲ. ನನಗೆ ಏತಕ್ಕೆ ಈ ಶಿಕ್ಷೆ ವಿಧಿಸಿದ್ದಾರೋ ಅದೂ ತಿಳಿಯದು" ಎಂದ ಅಬೂಸೀರ್.

"ಹಾಗಾದರೆ ನಿನ್ನ ವಿರೋಧಿಗಳು ಯಾರೋ ನಿನ್ನ ಮೇಲೆ ಮಹಾರಾಜರ ಹತ್ತಿರ ಚಾಡಿ ಹೇಳಿರ



ಬೇಕು. ಒಳ್ಳೆಯ ರೀತಿಯಲ್ಲಿರುವವನಿಗೆ ವಿರೋಧಿಗಳೂ ಇರುತ್ತಾರೆ. ಹೆದರಬೇಡ. ಈ ದ್ವೀಪದಲ್ಲೇ ಇದ್ದುಬಿಡು. ನಿನಗೆ ಎಂತಹ ಆಪತ್ತೂ ಬಾರದು. ಮೀನು ಹಿಡಿಯುತ್ತಾ ಕುಳಿತೆಯೆಂದರೆ, ಕಾಲಕ್ಷೇಪವೂ ಆಗುತ್ತೆ, ಅಷ್ಟರೊಳಗೆ ನಿನ್ನನ್ನು ನಿಮ್ಮ ದೇಶಕ್ಕೆ ಕಳುಹಿಸುವ ಉಪಾಯ ಯಾವುದಾದರೂ ನೋಡುತ್ತೇನೆ" ಎಂದ ರೇವಿನ ಅಧಿಕಾರಿ.

ಆಮೇಲೆ ರೇವಿನ ಅಧಿಕಾರಿ ಒಂದು ಗೋಣೀ ಚೀಲದೊಳಗೆ ಸುಟ್ಟ ಸುಣ್ಣದ ಚಿಪ್ಪುಗಳನ್ನೂ ಕಲ್ಲುಗಳನ್ನೂ ತುಂಬಿ ಕಟ್ಟಿ, ದೋಣಿಯಲ್ಲಿ ಏರಿಸಿ ಸಮುದ್ರದಲ್ಲಿ ಸಾಗಿ ರಾಜಭವನದ ಕಿಟಕಿಗಳಿಗೆ ಇದಿರಾಗಿ ದೋಣಿಯನ್ನು ನಿಲ್ಲಿಸಿದಾಗ, ರಾಜನು ಕೈಯಾಡಿಸಿ ಸಂಜ್ಞೆ ತೋರಿಸಿದನು. ಕೂಡಲೇ ರೇವಿನ ಅಧಿಕಾರಿ ಆ ಗೋಣೀ ಚೀಲವನ್ನು ಸಮುದ್ರದಲ್ಲಿ ದೂಡಿಬಿಟ್ಟನು. ಆದನ್ನು ನೋಡಿದಾಗ ರಾಜನಿಗೆ ಸಂತೃಪ್ತಿಯೆನಿಸಿತು.

ಆಗ ಒಂದು ಸಂಗತಿ ನಡೆದುಹೋಯಿತು. ರಾಜನು ಕಯ್ಯನ್ನು ಆಡಿಸುವಾಗ ರಾಜನ ಬೆರಳಿನಲ್ಲಿದ್ದ ಒಂದು ಉಂಗುರವು ಜಾರಿ ಸಮುದ್ರದಲ್ಲಿ ಬಿದ್ದು ಹೋಯಿತು. ಅದೊಂದು ಅದ್ಭುತ ಶಕ್ತಿಯ ಉಂಗುರವೆಂದೂ, ಅದರ ಮಹಿಮೆಯಿಂದ ರಾಜನನ್ನು ಇದಿರಿಸಿದವರು ಭಸ್ಮವಾಗಿ ಹೋಗುವರೆಂದೂ ಆ ದೇಶದ ಪ್ರಜೆಗಳಲ್ಲಿ ನಂಬುಗೆಯಿತ್ತು. ಅಂತೆಯೇ ಅದು ಹೋಯಿತೆಂದು ತಿಳಿದರೆ ಪ್ರಜೆಗಳಿಗೆ ರಾಜನ ಮೇಲಿರುವ ವಿಶ್ವಾಸವು ಕಡಮೆಯಾಗಿ ಹೋಗುವ ಭಯವಿತ್ತು. ಆದುದರಿಂದ ರಾಜನು ತನ್ನ ಉಂಗುರವು ಸಮುದ್ರದಲ್ಲಿ ಬಿದ್ದುಹೋದ ಸಂಗತಿ ಇನ್ನೊಂದು ಪ್ರಾಣಿಗೆ ತಿಳಿಯದಂತೆ ರಹಸ್ಯವಾಗಿಟ್ಟುಕೊಂಡನು.

ಕಿರುದ್ವೀಪದಲ್ಲಿ ಒಬ್ಬಂಟಿಗನನ್ನಾಗಿ ಬಿಡಲ್ಪಟ್ಟ ಅಬೂಸೀರ್, ರೇವಿನ ಅಧಿಕಾರಿ ಕೊಟ್ಟ ಬಲೆಯನ್ನು ತೆಗೆದುಕೊಂಡು ಮೀನುಗಳನ್ನು ಹಿಡಿಯಲು ಹೊರಟನು. ಅವನಿಗೆ ಅದರಿಂದ ಹೊಟ್ಟೆ ತುಂಬು






ವುದು ಮಾತ್ರವಲ್ಲದೆ, ಚಿಂತೆ ಹುಟ್ಟಿಸುವ ಆಲೋಚನೆಗಳು ಬಾರದಂತೆಯೂ ನೋಡಿಕೊಳ್ಳಬಹುದು.

ಅಬೂಸೀರ್ ಸಮುದ್ರದಲ್ಲಿ ಬಲೆ ಹಾಕಿದ ಕೂಡಲೇ ಅದರಲ್ಲಿ ದೊಡ್ಡವೂ, ಚಿಕ್ಕವೂ, ಬಣ್ಣಬಣ್ಣದುವೂ ಅನೇಕ ಮೀನುಗಳು ಬಿದ್ದುವು. ಅವುಗಳನ್ನು ನೋಡಿದಾಗ ಮೀನಿನ ಪಲ್ಯ ತಿಂದು ಬಹಳ ಕಾಲವಾಯಿತೆಂದು ತೋರಿತು ಅಬೂಸೀರನಿಗೆ. ಆ ಮೀನುಗಳನ್ನು ರೇವಿನ ಅಧಿಕಾರಿಗೆ ಕೊಟ್ಟು, ಅಡಿಗೆ ಮಾಡಿಸಿ, ತಾನು ಕೂಡಾ ಸಾಕಷ್ಟು ಮೀನು ಪಲ್ಯ ತಿನ್ನಬೇಕೆಂದುಕೊಂಡ.

ಈ ಕೆಲಸದಲ್ಲಿ ರೇವಿನ ಅಧಿಕಾರಿಗೆ ಮುಖ್ಯ ಕಾರ್ಯಭಾಗವೇ ಇತ್ತು. ದಿನಾ ಸಮುದ್ರದಲ್ಲಿ ಮೀನುಗಳನ್ನು ಹಿಡಿದು, ಇಬ್ಬರು ಅಡಿಗೆಯವರಿಂದ ಅವುಗಳ ಅಡಿಗೆಯನ್ನು ಮಾಡಿಸಿ ರಾಜನಿಗೆ ಕಳುಹಿಸುವ ಕೆಲಸ ರೇವಿನ ಅಧಿಕಾರಿಯದೇ. ಈ ದಿನ ಬೇರೆ ಕೆಲಸವಿಲ್ಲದಿರುತ್ತಿದ್ದರೆ, ಆ ಬಲೆಯಲ್ಲಿ ರೇವಿನ ಅಧಿಕಾರಿಯೇ ಮೀನು ಹಿಡಿಯುತ್ತಿದ್ದ. ಈ ದಿನ ಅಬೂಸೀರ್ ಬಲೆ ಹಾಕಿ ಮೀನು ಹಿಡಿದದ್ದು ರೇವಿನ ಅಧಿಕಾರಿಗಾಗಿಯೇ.

ಬಲೆಯಲ್ಲಿ ಬಿದ್ದ ಮೀನುಗಳಲ್ಲಿ ದೊಡ್ಡದೊಂದನ್ನು ಆರಿಸಿ, ಅದನ್ನು ತನಗಾಗಿ ಅಡಿಗೆ ಮಾಡಿಸಬೇಕೆಂದುಕೊಂಡು ಅಬೂಸೀರ್ ತನ್ನ ಚಾಕು ತೆಗೆದು ಆ ಮೀನನ್ನು ಕೊಯ್ದನು. ಪುನಃ ಅವನು ಚಾಕು ಮೇಲೆತ್ತಿದಾಗ, ಅದರ ಮೊನೆಯಲ್ಲಿ ತಗಲಿಕೊಂಡು ಬಂಗಾರದ ಉಂಗುರವು ಹೊಳೆಯುವುದು ಕಾಣಿಸಿತು. ಅದು ರಾಜನು ಕಳೆದುಕೊಂಡ ಮಹಿಮೆಯ ಉಂಗುರವೇ ಆಗಿತ್ತು. ಆ ಸಂಗತಿ ಗೊತ್ತಿಲ್ಲದೆ ಅಬೂಸೀರ್ ಆ ಉಂಗುರವನ್ನು ತನ್ನ ಬೆರಳಿಗೆ ಹಾಕಿಕೊಂಡನು.

ಸ್ವಲ್ಪಹೊತ್ತಿನ ಮೇಲೆ ರೇವಿನ ಅಧಿಕಾರಿ ಅವನ ಬಳಿಗೆ ಬಂದು, ಅಬೂಸೀರನ ಕೈಬೆರಳಿನಲ್ಲಿರುವ ಉಂಗುರವನ್ನು ನೋಡಿ ಬೆರಗಾಗಿ, ಅದು ಹೇಗೆ ದೊರಕಿತೆಂದು ಕೇಳಿದನು. ಅದನ್ನು ತಿಳಿದ ಮೇಲೆ ಅವನು ತಲೆದೂಗುತ್ತ, "ಅಲ್ಲಾನ ದಯೆ! ಯಾರ ವಿಧಿ ಹೇಗೆ ಹೋಗುವುದೋ ಯಾರಿಗೂ ಮೊದಲು ತಿಳಿಯದು. ನೀನೀಗ ಈ ಉಂಗುರದೊಂದಿಗೆ ರಾಜರ ಕಣ್ಣಿಗೆ ಬೀಳಬಹುದಪ್ಪಾ. ನಿನ್ನನ್ನು ಯಾರೂ ತಡೆಯುವವರಿಲ್ಲ. ರಾಜನು ಕೂಡಾ ನಿನ್ನ ಮುಂದೆ ಬೆಕ್ಕಾಗಿ ಹೋಗುತ್ತಾನೆ!" ಎಂದನು.

ಅಷ್ಟು ತಿಳಿದ ಮೇಲೆ ಅಬೂಸೀರ್, ಉಂಗುರದ ಮಹಿಮೆಯನ್ನು ಪೂರಾ ತಿಳಿದುಕೊಂಡು, ಧೈರ್ಯದಿಂದ ರಾಜಭವನಕ್ಕೆ ಹೋದನು. ರಾಜನು ದರ್ಬಾರಿನಲ್ಲಿ ಆಸೀನನಾಗಿದ್ದನು. ಅವನು ಅಬೂಸೀರನನ್ನು ನೋಡಿ ಆಶ್ಚರ್ಯದಿಂದ, "ನೀನು ನನ್ನ ಎದುರು ಸಮುದ್ರದಲ್ಲಿ ಬಿದ್ದು ಸತ್ತೆಯಲ್ಲ? ಹೇಗೆ ಬದುಕಿ ಬಂದೆ?" ಎಂದು ಕೇಳಿದನು.

ಅಬೂಸೀರ್ ತನ್ನನ್ನು ಮರಣದಂಡನೆಯಿಂದ ರೇವಿನ ಅಧಿಕಾರಿ ಹೇಗೆ ಕಾಪಾಡಿದನೆಂಬುದನ್ನೆಲ್ಲಾ

ಹೇಳುತ್ತ, ಉಂಗುರವು ಸಿಕ್ಕಿದ ರೀತಿಯನ್ನೂ ಹೇಳಿದನು. "ಮಹಾಪ್ರಭುಗಳೇ, ತಾವು ನನಗೆ ತೋರಿಸಿದ ಅನುಗ್ರಹಕ್ಕೆ ಪಾರವೇ ಇಲ್ಲ. ಆದುದರಿಂದ ತಮಗೆ ಈ ಉಂಗುರವನ್ನು ಕೊಡಲಿಕ್ಕಾಗಿಯೇ ಬಂದಿದ್ದೇನೆ. ನಾನು ಯಾವ ಅಪರಾಧವನ್ನೂ ಮಾಡಲಿಲ್ಲ. ಆದರೆ ಇನ್ನು ಮೇಲೆ ನಿಮ್ಮ ಎದುರಿಗೆ ಎಂದೂ ಬರಲಾರೆ. ದಯವಿಟ್ಟು ನನ್ನ ಮೇಲೆ ಯಾವ ಆರೋಪಣೆ ಹಾಕಿ ಮರಣದಂಡನೆ ವಿಧಿಸಿದ್ದೀರಿ ಎಂಬುದನ್ನು ತಿಳಿಸಬೇಕೆಂದು ಬೇಡಿಕೊಳ್ಳುತ್ತೇನೆ" ಎಂದನು.

ಅವನು ಕೊಟ್ಟ ಉಂಗುರವನ್ನು ತೆಗೆದುಕೊಂಡು ತನ್ನ ಬೆರಳಿಗೆ ಹಾಕಿಕೊಂಡ ಕೂಡಲೇ, ರಾಜನಿಗೆ ಪ್ರಾಣವು ಚೇತರಿಸಿಕೊಂಡಂತಾಯಿತು. ಅವನು ಸಂತೋಷದಿಂದ ಅಬೂಸೀರನನ್ನು ಆಲಿಂಗಿಸಿಕೊಂಡು "ನನ್ನ ಕ್ರೂರತನವನ್ನು ಮರೆತುಬಿಡು. ಇನ್ನೊಬ್ಬನಾಗಿರುತ್ತಿದ್ದರೆ ಈ ಉಂಗುರವನ್ನು ನನಗೆ ತಿರುಗಿ ಕೊಡುತ್ತಿರಲಿಲ್ಲ. ಇದರಿಂದ ಈ ದೇಶವನ್ನೇ ಆಳುವ ಪ್ರಯತ್ನ ಮಾಡುತ್ತಿದ್ದ. ಇನ್ನು ನಿನ್ನ ಮೇಲಿನ ಆರೋಪಣೆ ಏನೆಂಬುದನ್ನು ಕೇಳು. ನಿನ್ನ ಮೇಲೆ ಅಬೂಕೀರ್ ಎಂಬ ರಂಗಾರೀ ಇಲ್ಲದ ಅಪರಾಧವನ್ನು ಹಾಕಿದನೆಂದು ನನಗೀಗ ಅನುಮಾನವಾಗಿದೆ. ನೀನು ನಮ್ಮ ಶತ್ರು ಪಕ್ಷದವನಾಗಿದ್ದು, ರೋಮನಾಶಿನಿಯಿಂದ ನನ್ನನ್ನು ಕೊಲ್ಲಲು ಬಂದವನೆಂದು ಅವನು ನನ್ನೊಡನೆ ಹೇಳಿದ" ಎಂದನು.

ಅಬೂಸೀರನ ಕಣ್ಣುಗಳಲ್ಲಿ ನೀರು ತುಂಬಿತು. ಅವನು ರಾಜನೊಂದಿಗೆ, ಅಬೂಕೀರ್ ಮೊದಲಿಂದಲೂ ತನಗೆ ಮಾಡಿದ ದ್ರೋಹ ವೃತ್ತಾಂತವನ್ನೆಲ್ಲಾ ಹೇಳಿ, "ರೋಮಹಾರಿಣಿಯನ್ನು ತಿಂದರೆ ವಿಷವೇ ಹೊರತು ಚರ್ಮಕ್ಕೆ ಹಚ್ಚಿಕೊಳ್ಳುವುದರಿಂದ ಯಾವ ಅಪಾಯವೂ ಇಲ್ಲ" ಎಂದನು.

ರಾಜನಿಗೆ ಅಬೂಸೀರನ ಮಾತುಗಳಲ್ಲಿ ನಂಬುಗೆಯುಂಟಾಯಿತು. ಆದರೂ ಸತ್ರದ ದರ್ವಾನನನ್ನೂ,



ಅಬೂಕೀರನ ಹತ್ತಿರ ಕೆಲಸ ಮಾಡಿದವರನ್ನೂ ಕರೆಯಿಸಿ ಅಬೂಸೀರ್ ಹೇಳಿದ ವಿಷಯವೆಲ್ಲಾ ನಿಜವೆಂದು ರೂಢಿಪಡಿಸಿಕೊಂಡನು. ತರುವಾಯ ಅವನು ತನ್ನ ಭಟರನ್ನು ಕರೆದು, "ರಂಗಾರೀ ಅಬೂಕೀರನನ್ನು ಹೆಡೆಮುಡಿ ಕಟ್ಟಿ ತೆಗೆದುಕೊಂಡು ಬನ್ನಿ" ಎಂದು ಅಪ್ಪಣೆ ಮಾಡಿದನು.

ಭಟರು ಹೋಗಿ ಅಬೂಕೀರನನ್ನು ಹೊಡೆದು ಗುದ್ದಿ ಹದಮಾಡಿ ಕಟ್ಟಿ ರಾಜಸಭೆಗೆ ಎಳೆದುಕೊಂಡು ಬಂದರು. ಇಷ್ಟು ಹೊತ್ತಿಗೆ ಸತ್ತು ಹೋಗಿರಬೇಕಾಗಿದ್ದ ಅಬೂಸೀರ್ ದರ್ಬಾರಿನಲ್ಲಿ ರಾಜನ ಪಕ್ಕದಲ್ಲೇ ಕುಳಿತಿರುವುದನ್ನು ನೋಡಿದ ಕೂಡಲೇ ಅಬೂಕೀರನ ಜಂಘಾಬಲವೇ ಬಿದ್ದುಹೋಯಿತು.

ರಾಜನು ಅವನನ್ನು ಕುರಿತು, "ಎಲೋ ಪರಮ ದ್ರೋಹಿಯೇ! ಇವನು ನಿನ್ನ ಸ್ನೇಹಿತ. ನೀನು ಇವನದೆಲ್ಲಾ ಸೊತ್ತೂ ದೋಚಿದವನು; ಇವನನ್ನು ಹೊಡೆದು ದೂಡಿ ಅವಮಾನಿಸಿದವನು. ಕಡೆಗೆ ಕೊಲ್ಲ

ಲಿಕ್ಕೆ ಪ್ರಯತ್ನಿಸಿದವನು. ಭಗವಂತನ ಅನುಗ್ರಹ ದಿಂದಲೇ ಅವನು ಸಾಯಲಿಲ್ಲ. ಇದನ್ನೆಲ್ಲಾ ಅಲ್ಲ ಗಳೆಯುವೆಯಾ ?" ಎಂದನು.

"ಅಲ್ಲವೆನ್ನಲು ಸಾಧ್ಯವಿಲ್ಲ. ಹೇಗೆ ಅಲ್ಲವೆನ್ನು ವನು ?" ಎಂದು ಸಾಕ್ಷಿದಾರರು ಗಟ್ಟಿಯಾಗಿ ಕೂಗಿ ದರು. ಅಬೂಕೀರ್ ಸುಮ್ಮನಿದ್ದ.

ರಾಜನು ತನ್ನ ಭಟರನ್ನು ನೋಡಿ, "ಈ ದುಷ್ಟನ ಕಾಲುಗಳನ್ನು ಹಿಡಿದುಕೊಂಡು ಎಳೆಯುತ್ತಾ, ನಗರ ದೊಳಗೆಲ್ಲಾ ತಿರುಗಾಡಿಸಿ, ಸುಟ್ಟ ಸುಣ್ಣದ ಚಿಪ್ಪಿನ ಗೋಣಿಯೊಳಗೆ ತುರುಕಿ ಕಟ್ಟಿ ಸಮುದ್ರದೊಳಗೆ ಹಾಕಿರಿ !" ಎಂದನು.

ಆಗ ಅಬೂಸೀರ್ ಆವೇದನೆಯ ಕಂಠದಿಂದ, "ಮಹಾರಾಜರೆ, ನನ್ನ ವಿಜ್ಞಾಪನೆಯನ್ನು ಕೇಳ ಬೇಕು. ಇವನನ್ನು ಶಿಕ್ಷಿಸಬಾರದು. ನಾನು ಇವನನ್ನು ಕ್ಷಮಿಸಬಲ್ಲೆನು" ಎಂದನು.

"ನೀನು ಕ್ಷಮಿಸಿದರೂ ನಾನು ಕ್ಷಮಿಸಲಾರೆ. ಭಟರೆ, ನೋಡುವಿರೇನು ? ಇವನನ್ನು ಎಳೆದು ಕೊಂಡು ಹೋಗಿರಿ !" ಎಂದ ರಾಜ.

ರಾಜಭಟರು ಅಬೂಕೀರ್ ಮಾಡಿದ ದ್ರೋಹ ಗಳನ್ನು ಪ್ರಜೆಗಳಿಗೆ ಹೇಳುತ್ತಾ, ನಗರದೊಳಗೆಲ್ಲಾ ಅವನನ್ನು ಎಳೆಯುತ್ತಾ ಹೋಗಿ, ಸುಣ್ಣದ ಚಿಪ್ಪಿನ ಗೋಣೀ ಚೀಲದೊಳಗೆ ಅವನನ್ನು ಇಟ್ಟು ಕಟ್ಟಿ ಒಯ್ದು ಸಮುದ್ರದಲ್ಲಿ ಹಾಕಿಬಿಟ್ಟರು. ಸುಣ್ಣದ ಚಿಪ್ಪುಗಳ ಕುದಿತದಿಂದಲೂ, ನೀರಿನಿಂದಲೂ ಅಬೂಕೀರ್ ಸತ್ತನು.

ರಾಜನು ಅಬೂಸೀರನನ್ನು ನೋಡಿ, ಅವನಿಗೆ ಏನುಬೇಕಾದರೂ ಕೊಡುವುದಾಗಿ ಹೇಳಿದನು. "ಮಹಾರಾಜರೆ, ನನಗೆ ಸ್ವಂತ ಊರಿಗೆ ಹೋಗುವ ಕೋರಿಕೆಯ ಹೊರತು, ಬೇರೆ ಯಾವ ಕೋರಿಕೆಯೂ ಇಲ್ಲ" ಎಂದ ಅಬೂಸೀರ್.

"ನಿನ್ನನ್ನು ನನ್ನ ಮಂತ್ರಿಯನ್ನಾಗಿಟ್ಟುಕೊಳ್ಳು ತ್ತೇನೆ, ಇರಲಾರೆಯಾ ?" ಎಂದು ಕೇಳಿದ ರಾಜ, ಅಬೂಸೀರ್ ಇರಲಾರೆನೆಂದು ತಲೆಯಾಡಿಸಿದ. ಆಮೇಲೆ ರಾಜನು ಅಬೂಸೀರನಿಗಾಗಿ ದೊಡ್ಡ ದೊಂದು ಹಡಗನ್ನು ಸಿದ್ಧಮಾಡಿಸಿ, ಅದರ ತುಂಬಾ ಧನ ರಾಶಿಗಳನ್ನೂ, ಗಂಡು ಹೆಣ್ಣು ಗುಲಾಮರನ್ನೂ, ತುಂಬಿಸಿ ಅವನನ್ನು ಬಹು ವೈಭವದಿಂದ ಅಲೆಗ್ಜಾಂಡ್ರಿ ಯಾಕ್ಕೆ ಕಳುಹಿಸಿಕೊಟ್ಟನು.

ಅಬೂಸೀರ್ ಅಲೆಗ್ಜಾಂಡ್ರಿಯಾದ ರೇವಿನಲ್ಲಿ ಇಳಿಯುವ ಸಮಯಕ್ಕೆ ಅಲ್ಲಿಗೆ ಒಂದು ಗೋಣೀ ಚೀಲ ತೊಡೆದುಕೊಂಡು ಬಂದು ದಡಸೇರಿತ್ತು. ಅದರೊಳಗಿದ್ದುದು ಅಬೂಕೀರನ ಶವ ! ಅಬೂಸೀರ್ ಆ ಶವಕ್ಕೆ ಸಮುದ್ರತೀರದಲ್ಲಿಯೇ ಭವ್ಯವಾಗಿ ಸಮಾಧಿ ಮಾಡಿಸಿದನು.

(ಮುಗಿಯಿತು)





# ಅಧರ್ಮಛತ್ರ

ಅನೇಕ ವರ್ಷಗಳ ಹಿಂದೆ ರಂಗಾಪುರವೆಂಬ ಊರಿನಲ್ಲಿ ಹಿರಿಯರೆಲ್ಲರೂ ಒಂದುಗೂಡಿ ಒಂದು ಮುಖ್ಯ ವಿಷಯ ಆಲೋಚನೆ ಮಾಡಿದರು. ಏನೆಂದರೆ, ಪ್ರಯಾಣಿಕರ ಸೌಕರ್ಯಾರ್ಥವಾಗಿ ಹೆದ್ದಾರಿಯ ಬದಿಯಲ್ಲಿ ಒಂದು ಧರ್ಮಛತ್ರವನ್ನು ಕಟ್ಟಿಸಬೇಕು, ಅದರಲ್ಲಿ ಅಡಿಗೆ ಮಾಡಲು ಒಬ್ಬಳು ಹೆಂಗಸನ್ನೂ, ಲೆಕ್ಕ ಬರೆಯಲು ಒಬ್ಬ ಗುಮಾಸ್ತನನ್ನೂ, ಇತರ ಚಿಲ್ಲರೆ ಕೆಲಸಗಳಿಗಾಗಿ ಒಬ್ಬ ಸೇವಕನನ್ನೂ ಇಟ್ಟು ಇದರ ಎಲ್ಲಾ ನಿರ್ವಹಣೆಗೆ ಆಗುವ ಖರ್ಚು ದೇವರ ಮಾನ್ಯದಿಂದ ಬರುವಂತೆ ಮಾಡಬೇಕು. ಈ ಆಲೋಚನೆ ಕೂಡಲೇ ಕಾರ್ಯಗತವೂ ಆಯಿತು.

ಸ್ವಲ್ಪ ಕಾಲದವರೆಗೆ ಛತ್ರದ ಕೆಲಸ ಕಾರ್ಯಗಳು ಸಕ್ರಮವಾಗಿ ನಡೆದುವು. ಊರಿಗೆ ದೂರದಲ್ಲಿರುವ ಆ ಛತ್ರಕ್ಕೆ ಯಾತ್ರಿಕರೂ ಪ್ರಯಾಣಿಕರೂ ಹೊರತು ಬೇರೆ ಯಾರೂ ಬರುತ್ತಿರಲಿಲ್ಲ. ಊರಿನವರು ಆ ಕಡೆಗೆ ಸುಳಿಯುತ್ತಲೂ ಇರಲಿಲ್ಲ. ಸಾಧಾರಣ ಪ್ರಯಾಣಿಕರು ಛತ್ರದಲ್ಲಿ ಊಟ ಮಾಡಿ, ಮಲಗಿ ನಿದ್ದೆ ತೀರಿಸಿ ಮಾರುದಿನ ತಮ್ಮ ಪ್ರಯಾಣವನ್ನು ಮುಂದುವರಿಸುತ್ತಿದ್ದರು. ಸ್ವಲ್ಪ ಹಣವಿದ್ದವರಾದರೆ ಛತ್ರದಲ್ಲಿಯ ಮೂವರು ಸೇವಕರಿಗೆ ತಮಗೆ ತೋರಿದಷ್ಟು ಇನಾಮು ಕೊಟ್ಟು ಹೊರಟು ಹೋಗುವರು.

ಹೀಗೆ ಇನಾಮು ತೆಗೆದುಕೊಳ್ಳಲು ಅಭ್ಯಾಸವಾದಂತೆ ಅಲ್ಲಿಯ ಸೇವಕರು ಮೂವರೂ ಪ್ರಯಾಣಿಕರ ಹತ್ತಿರ ಕೈನೀಡಿ ಹಣ ಕೇಳಲಾರಂಭಿಸಿದರು. ಬರಬರುತ್ತ ಹಣ ಕೊಡಲು ಸಾಧ್ಯವಿಲ್ಲದವರನ್ನು ಛತ್ರದಲ್ಲಿ ಕಾಲಿಡಲೂ ಬಿಡುತ್ತಿರಲಿಲ್ಲ. ಪ್ರಯಾಣಿಕರು ಬಂದ ಕೂಡಲೇ ಸೇವಕರು ತಮ್ಮ 'ಮಾಮೂಲು' ವಸೂಲು ಮಾಡಿಬಿಡುತ್ತಿದ್ದರು. ಹಣ ಕೊಟ್ಟ ಹೊರತು ಅಡಿಗೇ ಹೆಂಗುಸು ಎಲೆ ಹಾಕುವವಳಲ್ಲ. ಮತ್ತೆ ಹಣ ಕೊಟ್ಟ ಹೊರತು ಗುಮಾಸ್ತನು ಮಲಗಲು ಸ್ಥಳ ತೋರಿಸುತ್ತಿರಲಿಲ್ಲ. ಈ ರೀತಿಯಾಗಿ ಧರ್ಮಛತ್ರವು ಊಟದ ಅಂಗಡಿಯಾಯಿತು. ಈ ಸಂಗತಿ ಊರೊಳಗಿನ ಪ್ರಮುಖರಿಗೆ ತಿಳಿಯದಂತೆ ಛತ್ರದ ಮೂವರು ಪ್ರಮುಖ ಸೇವಕರೂ ಜಾಗರೂಕರಾಗಿದ್ದರು.

ಹೀಗಿರುವಾಗ ಒಂದುಸಾರಿ ಒಬ್ಬ ಯುವಕ ಆರ್ಯಪುರಕ್ಕೆ ಪ್ರಯಾಣ ಮಾಡುತ್ತ, ದಾರಿಯಲ್ಲಿ ಕತ್ತಲೆ ಬಿದ್ದುದರಿಂದ ರಂಗಾಪುರದ ಛತ್ರದಲ್ಲಿ ತಂಗಿ ರಾತ್ರಿ

ಪಿ. ದುರ್ಗಾಲಕ್ಷ್ಮಿ



ಯನ್ನು ಕಳೆಯಬೇಕೆಂದು ಮಾಡಿದನು. ಆದರೆ ಅವನ ಹತ್ತಿರ ಹಣವಿಲ್ಲದುದರಿಂದ ಛತ್ರದ ಸೇವಕರು ಅವನನ್ನು ಒಳಗೆ ಬರಲು ಬಿಡಲಿಲ್ಲ. ಅವನು ಆ ರಾತ್ರಿ ತಿಂಡಿ ತೀರ್ಥಗಳೇನಿಲ್ಲದೆ, ಛತ್ರದ ಹಿಂದಿರುವ ಯಾವ ಮರದ ಕೆಳಗೋ ತೂಕಡಿಸಿಕೊಂಡಿದ್ದು, ಮರುದಿನ ತನ್ನ ಪ್ರಯಾಣ ಮುಂದುವರಿಸಿ ಆರ್ಯಾಪುರಕ್ಕೆ ಹೋದನು. ರಂಗಾಪುರದ ಛತ್ರದಲ್ಲಿ ತನಗೆ ನಡೆದ ಅನುಭವವನ್ನು ಕುರಿತು ಅಲ್ಲಿಯ ತನ್ನ ಮಿತ್ರರೊಂದಿಗೆ ಹೇಳಿದನು.

ಈ ಸಮಾಚಾರ ಕೇಳಿದವರೊಳಗೆ ರಾಮಣ್ಣನೆಂಬವನು, ಆ ಛತ್ರದ ಆಳುಗಳಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿಕೊಂಡನು. ಅಂತೆಯೇ ಅವನು ಒಬ್ಬ ಸೇವಕನನ್ನು ತನ್ನೊಂದಿಗೆ ಕರೆದುಕೊಂಡು, ರಾತ್ರಿ ಊಟದ ಹೊತ್ತಿಗೆ ರಂಗಾಪುರದ ಛತ್ರವನ್ನು ಸಮೀಪಿಸುತ್ತ, ತನ್ನ ಸೇವಕನೊಂದಿಗೆ, "ಎಲೋ, ನೀನು ಊರೊಳಗೆ ಹೋಗಿ, ಅಲ್ಲಿಯ ಪ್ರಮುಖರೊಂದಿಗೆ ರಂಗಾಪುರದ ರಾಜನ ಭಾವಮೈದುನ ಛತ್ರದಲ್ಲಿ ಇಳಿದುಕೊಂಡಿದ್ದಾರೆ ಅಂತ ಹೇಳಿಬಾ" ಎಂದು ಹೇಳಿ ಕಳುಹಿಸಿ, ತಾನು ಛತ್ರವನ್ನು ತಲಪಿದನು.

ಕೂಡಲೇ ಛತ್ರದ ಸೇವಕ ರಾಮಣ್ಣನ ಬಳಿಗೆ ಬಂದು, "ಹಣ ಕೊಡಿ, ಸ್ನಾನಕ್ಕೆ ನೀರು ತೋರುತ್ತೇನೆ" ಎಂದನು.

ರಾಮಣ್ಣ ಕಿವುಡನ ಹಾಗೆ ನಟಿಸುತ್ತ, "ಹೌದು, ನಾನು ಒಬ್ಬನೇ ಬಂದಿದ್ದೇನೆ" ಎಂದು ಹೇಳುತ್ತ ಛತ್ರದೊಳಗೆ ಪ್ರವೇಶಿಸಿದನು,

ಅಲ್ಲಿ ಅಡಿಗೆ ಹೆಂಗುಸು ಎಲೆ ಹಾಕಿ ಬಡಿಸುತ್ತಾ ಇದ್ದಳು. ಅವಳು ರಾಮಣ್ಣನನ್ನು ನೋಡಿ, "ಊಟ ಬೇಕಲ್ಲವೆ? ಹಣಕೊಡ್ತೀರಾ? ನಿಮಗೆ ಕೂಡಾ ಎಲೆ ಹಾಕುತ್ತೇನೆ" ಎಂದಳು.

"ಪಥ್ಯಗಿಥ್ಯ ಏನಿಲ್ಲಮ್ಮ! ಏನಾದರೂ ತಿನ್ನುತ್ತೇನೆ. ಒಳ್ಳೇ ಹಸಿವೆ" ಎನ್ನುತ್ತ ರಾಮಣ್ಣ ತಟಕ್ಕನೆ ಒಂದು ಎಲೆಯ ಮುಂದೆ ಕುಳಿತುಬಿಟ್ಟನು.

"ಏಳಯ್ಯಾ! ಈ ಎಲೆ ನಿನಗೆ ಹಾಕಿದ್ದಲ್ಲ!" ಎಂದು ಅಡಿಗೇ ಹೆಂಗುಸು ಕೂಗಿ ಹೇಳಿದರೂ ರಾಮಣ್ಣ ಕೇಳಿಸಿಕೊಳ್ಳದಂತೆಯೇ ನಟಿಸಿದನು. ಅಡಿಗೆ ಹೆಂಗುಸು ಸಿಡುಕಿನಿಂದ ಮುಣುಮುಣಿಸಿದಳು.

"ಕೂತುಕೊಳ್ಳಲಿ ಬಿಡಮ್ಮಾ, ಆತನಿಗೆ ಕಿವುಡು ಪಾಪ. ಇನ್ನೊಂದು ಎಲೆ ಆಕಡೆಯಲ್ಲಿ ಹಾಕಮ್ಮ" ಎಂದು ಊಟ ಮಾಡಲು ಬಂದವರಲ್ಲಿ ಒಬ್ಬನು ಹೇಳಿದ. ಎಲೆಯ ಮುಂದೆ ಕುಳಿತವನನ್ನು ಎಬ್ಬಿಸುವುದು ಮಹಾಪಾಪವೆಂದು ಕೆಲವರು ಹೇಳಿದ ಮೇಲೆ ಅಡಿಗೇ ಹೆಂಗುಸು ಏನೂ ಮಾಡಲಾರದೆ ಇಷ್ಟವಿಲ್ಲದೆ ಅವನಿಗೆ ಬಡಿಸಿದಳು.

ರಾಮಣ್ಣ ಹೊಟ್ಟೆ ತುಂಬ ಊಟ ಮಾಡಿ, ಕೈತೊಳೆದು ಗುಮಾಸ್ತನ ಮುಂದೆ ನಿಂತು, "ನಾನು ಎಲ್ಲಿ ಮಲಗಲಿ? ಹಾಸಿಗೆ ಎಲ್ಲಿ?" ಎಂದು ಕೇಳಿದ. "ಹಣ ಕೊಡಬೇಕು, ಹಣ!" ಎಂದ ಗುಮಾಸ್ತ.

"ಸಂತೋಷ ! ಬೂರುಗದ ಹತ್ತೀ ಹಾಸಿಗೇನೇ ಹಾಕಿರಿ. ನನಗೆ ಹೇಗಾದರೂ ಮಲಗಿ ಅಭ್ಯಾಸವಿದೆ" ಎಂದ ರಾಮಣ್ಣ.

ಗುಮಾಸ್ತ ಕೋಪದಿಂದ ಆಚೆಗೆ ಹೋಗಿ ಸೇವಕನ ಹತ್ತಿರ, "ಆ ಚಂಡೇ ಕಿವುಡನನ್ನು ಹೊರಗೆ ದೂಡೋ. ಈ ಛತ್ರ ತನ್ನ ತಾತನ ಆಸ್ತಿ ಅಂದು ಕೊಂಡಿದ್ದಾನೆ !" ಎಂದನು.

ಗುಮಾಸ್ತನೂ ಸೇವಕನೂ ಹಿಂದಿರುಗಿ ಬರುವುದರೊಳಗೆ, ಇನ್ನಾರಿಗೋ ಹಾಸಿದ ಹಾಸಿಗೆಯ ಮೇಲೆ ರಾಮಣ್ಣ ಮಲಗಿದ್ದ. ಆಗಲೇ ನಿದ್ದೆ ಬಂದವನಂತೆ ಗೊರಕೆ ಕೂಡಾ ಹೊಡೆಯುತ್ತಿದ್ದ.

ಸೇವಕನು ಬಂದು ಅವನನ್ನು ಅಲುಗಾಡಿಸಿ ಎಬ್ಬಿಸಿದನು. ರಾಮಣ್ಣ ಕಣ್ಣು ಬಿಡಿಸಿ "ಏನು ಕಥೆ ?" ಎಂದು ಕೇಳಿದ.

"ಮೊದಲು ಹೊರಗೆ ಹೋಗು !" ಎಂದ ಗುಮಾಸ್ತ ಗಟ್ಟಿಯಾಗಿ.

"ಈ ಹಾಸಿಗೆ ನನಗೆ ಚೆನ್ನಾಗೇ ಇದೆ. ಇಲ್ಲೇ ಮಲಗುತ್ತೇನೆ, ಪರವಾಯಿಲ್ಲ" ಎಂದ ರಾಮಣ್ಣ.

"ಇವನನ್ನು ಹೊರಗೆ ಎಳೆದು ಹಾಕದೆ ನೋಡುತ್ತಿಯೇನೋ ?" ಎಂದು ಗುಮಾಸ್ತ ಕೂಗಿದನು. ಸೇವಕನು ರಾಮಣ್ಣನನ್ನು ಎಳೆಯಲು ಪ್ರಯತ್ನಿಸುತ್ತಿದ್ದ. ಅಷ್ಟರಲ್ಲಿ ಊರೊಳಗಿನ ನಾಲ್ಕು ಮಂದಿ ಪ್ರಮುಖರು ಛತ್ರದೊಳಗೆ ಬಂದು, "ಇಲ್ಲಿಗೆ ನಮ್ಮ ರಾಜರ ಬಾವಮೈದಂದಿರು ಬಂದಿರುವಂತಲ್ಲಾ ? ಎಲ್ಲಿದ್ದಾರೆ ಅವರು ?" ಎಂದು ಕೇಳಿದರು.

ರಾಮಣ್ಣನು ಅವರೊಂದಿಗೆ, "ಅಯ್ಯಾ, ರಾಜರ ಬಾವಮೈದುನರು ಬಂದರೋ ಇಲ್ಲವೋ—ಇಲ್ಲಿ ನೋಡಿ ಇವರೆಲ್ಲ ಮಾಡುವುದನ್ನು ! ಹಣ ಕೊಡಲಿಲ್ಲವೆಂದು ಇವರೆಲ್ಲಾ ಕೂಡಿ ನನ್ನನ್ನು ಹೊರಗೆ ದೂಡುತ್ತಿದ್ದಾರೆ !" ಎಂದು ನಡೆದ ಸಂಗತಿಯನ್ನೆಲ್ಲಾ ಪ್ರಮುಖರೊಂದಿಗೆ ಹೇಳಿಬಿಟ್ಟನು.

ಊರ ಹಿರಿಯರು ಬೆರಗಾಗಿ ಉಳಿದ ಪ್ರಯಾಣಿಕರನ್ನೆಲ್ಲಾ ವಿಚಾರಿಸಿದಾಗ ಅವರೆಲ್ಲಾ ಸೇವಕನಿಗೂ, ಅಡಿಗೇ ಹೆಂಗುಸಿಗೂ, ಗುಮಾಸ್ತನಿಗೂ ಹಣ ಕೊಟ್ಟಿರುವ ಸಂಗತಿಯನ್ನು ಹೇಳಿದರು.

ಆಮೇಲೆ ಪಂಚಾಯುತಿಕೆ ನಡೆಯಿತು, ಛತ್ರದಲ್ಲಿ ಹೆಗ್ಗಣಗಳಂತೆ ಸೇರಿ, ಮೂವರೂ ಬಹಳ ಹಣ ಸಂಪಾದಿಸಿರುವ ಸಂಗತಿ ಬಯಲಾಯಿತು. ಊರ ಹಿರಿಯರು ಅವರಿಗೆ ಜುಲುಮಾನೆ ವಿಧಿಸಿ, ಕೆಲಸದಿಂದ ತೊಲಗಿಸಿ, ಹೊಸಬರನ್ನು ನಿಯಮಿಸಿದರು. ಆಮೇಲೆ ಆಗಾಗ ಅವರೂ ಬಂದು ಛತ್ರ ನಿರ್ವಹಣೆಯನ್ನು ತನಿಖೆ ಮಾಡಬೇಕೆಂದೂ ನಿಶ್ಚಯಿಸಿಕೊಂಡರು. ಅದರಿಂದ ಎಲ್ಲವೂ ಸರಿಯಾಗಿ ಅದು ನಿಜವಾದ ಧರ್ಮಛತ್ರ ಎನಿಸಿತು.



# ಬುದ್ಧಿಯಿಲ್ಲದ ಕಳ್ಳರು

**ಒ**ಬ್ಬ ಬ್ರಾಹ್ಮಣನು ಒಬ್ಬನೇ ಒಂದೂರಿಗೆ ಪ್ರಯಾಣ ಮಾಡುತ್ತಿದ್ದಾಗ ನಡುದಾರಿಯಲ್ಲಿ ಕತ್ತಲೆಯಾಯಿತು. ನಿರ್ಮಾನುಷ್ಯವಾದ ದಾರಿಯಲ್ಲಿ ಏಕಾಂಗಿಯಾದ ಬ್ರಾಹ್ಮಣನು ಹೆದರುತ್ತಾ ನಡೆಯುತ್ತಿದ್ದ. ಅವನ ಹೆದರಿಕೆಗೆ ಸರಿಯಾಗಿ ನಾಲ್ಕುಮಂದಿ ಕಳ್ಳರು ಅವನನ್ನು ಅಟಕಾಯಿಸಿ, ಹತ್ತಿರ ಇರುವುದನ್ನೆಲ್ಲಾ ಕೊಡುವಂತೆ ಜೋರು ಮಾಡಿದರು.

ಬ್ರಾಹ್ಮಣನ ಹತ್ತಿರ ಎರಡು ಬಂಗಾರದ ನಗಗಳೂ, ಸ್ವಲ್ಪ ಹಣವೂ ಇದ್ದುವು. ಅವುಗಳನ್ನು ಕೊಡದೇಹೋದರೆ ಕಳ್ಳರು ಪ್ರಾಣ ತೆಗೆಯಲಿಕ್ಕೂ ಸಿದ್ಧರಿರುವಂತೆ ತೋರಿತು.

ಬ್ರಾಹ್ಮಣನು ತನ್ನ ಗಂಟು ಬಿಚ್ಚಿ ನಗಗಳನ್ನೂ ಹಣವನ್ನೂ ಅವರಿಗೆ ತೋರಿಸಿ, "ಹುಂ, ಕಳ್ಳ ಸೊತ್ತು ಕಳ್ಳರ ಪಾಲಿಗೇ ಸೇರಿತು ! ತೆಗೆದುಕೊಳ್ಳಿ !" ಎಂದನು.

"ಇದು ಕಳ್ಳ ಸೊತ್ತೆ ?" ಎಂದು ಕೇಳಿದರು ಕಳ್ಳರು.

"ಅಲ್ಲವೇ ಮತ್ತೆ ? ಎರಡು ಮೈಲುಗಳಿಗೆ ಹಿಂದೆ ಕಳ್ಳರು ಒಂದು ಗಾಡಿಯನ್ನು ಕೊಳ್ಳೆ ಹೊಡೆಯುತ್ತ, ಈ ಸುದ್ದಿ ಯಾರಿಗೂ ಹೇಳಬೇಡ ಅಂತ ಈ ನಗಗಳನ್ನೂ ಹಣವನ್ನೂ ನನ್ನ ಕೈಗೆ ಹಾಕಿದರು" ಎಂದ ಬ್ರಾಹ್ಮಣ. ಇದನ್ನು ಕೇಳಿ ಕಳ್ಳರು ಬ್ರಾಹ್ಮಣನ ಸೊತ್ತು ತೆಗೆದುಕೊಳ್ಳುವ ಆಲೋಚನೆ ಬಿಟ್ಟು, ಅವನು ಬಂದ ದಿಕ್ಕಿಗೆ ಓಡುತ್ತಾ ಹೋದರು. ಬ್ರಾಹ್ಮಣನು ಮುಂದೆ ಸಾಗಿ ಬೇಗದಲ್ಲೇ ಊರು ಸೇರಿಕೊಂಡ.





# ಬ್ರಾಹ್ಮಣನ ಯುಕ್ತಿ

ಬಹಳಕಾಲದ ಹಿಂದೆ ಸುರೇಂದ್ರ ನಗರ ರಾಜವಂಶದವರಿಗೆ ಜಾದೋಜಿಭಟ್ಟ ಎಂಬವನು ಕುಲಪುರೋಹಿತನಾಗಿದ್ದನು. ಆತನಿಗೆ ತೊಂಬತ್ತುವರ್ಷ ವಯಸ್ಸು ತುಂಬಿ ಬಂದಿತು. ಆಮೇಲೆ ಆತನು ರಾಜಾಸ್ಥಾನಕ್ಕೆ ಹೋಗುವುದನ್ನು ಬಿಟ್ಟು, ವರ್ಷದಲ್ಲಿ ಒಂದುದಿನ ತನ್ನ ವಾರ್ಷಿಕ ಗೌರವವನ್ನು ಪಡೆದುಕೊಳ್ಳಲಿಕ್ಕಾಗಿ ಮಾತ್ರ ಹೋಗುತ್ತಿದ್ದನು. ಮೊದಲು ಅವನಿದ್ದ ಸ್ಥಾನದಲ್ಲಿ ಅವನ ತಮ್ಮನ ಕುಮಾರ ವಲ್ಲಭಜೀ ಪಂಡಿತನೆಂಬವನು ರಾಜ ಪುರೋಹಿತನಾಗಿ ಕೆಲಸ ಮಾಡುತ್ತಿದ್ದನು.

ರಾಜಾಸ್ಥಾನಕ್ಕೆ ಹೋಗಿ ಬರುವುದನ್ನು ಬಿಟ್ಟರೂ ಸಹ ಜಾದೋಜೀ ಭಟ್ಟನಿಗೆ ಆಸ್ಥಾನದ ವ್ಯವಹಾರಗಳಲ್ಲಿರುವ ಆಸಕ್ತಿ ಒಂದಿಷ್ಟೂ ಕಡಮೆಯಾಗಿರಲಿಲ್ಲ. ದಿನಾ ವಲ್ಲಭಜೀ ಮನೆಗೆ ಬಂದ ಕೂಡಲೇ ಅಲ್ಲಿ ನಡೆದ ವಿಶೇಷಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದನು.

ಒಂದುದಿನ ಅವನು ಪೂಜಾ ಕಾರ್ಯದಲ್ಲಿರುವಾಗ ವಲ್ಲಭಜೀ ಮನೆಗೆ ಬಂದು ರಾಜಕುಮಾರರು ತಮ್ಮ ರಾಜ್ಯವನ್ನು ಹಂಚಿಕೊಳ್ಳಲಿರುತ್ತಾರೆ ಎಂಬ ಸುದ್ದಿ ಹೇಳಿದನು. ಅದು ಎರಡು ನಗರಗಳನ್ನೂ, ಹನ್ನೆರಡು ಗ್ರಾಮಗಳನ್ನೂ ಒಳಗೊಂಡಿರುವ ಆಸ್ತಿ. ನಗರಗಳಲ್ಲಿ ಸುರೇಂದ್ರನಗರ ಒಂದಾದರೆ, ಎರಡನೆಯದು ಚೂಡಾ ನಗರ. ಇರುವ ಇಬ್ಬರು ರಾಜಕುಮಾರರಲ್ಲಿ ಮೊದಲನೆಯವನ ಹೆಸರು ಅರ್ಜುನಸಿಂಗು, ಎರಡನೆಯವನು ಸಬಲಸಿಂಗು. ಅವರೊಬ್ಬೊಬ್ಬರಿಗೂ ಒಂದೊಂದು ನಗರದೊಂದಿಗೆ ಆರಾರು ಗ್ರಾಮಗಳು ಬರುತ್ತವೆ. ಇದೆಲ್ಲಾ ಸರಿಯಾದರೂ ಮುಖ್ಯ ನಗರವಾದ ಸುರೇಂದ್ರ ನಗರವು ತನಗೇ ಬೇಕೆಂದು ಅಣ್ಣನೂ ತನಗೇ ಬೇಕೆಂದು ತಮ್ಮನೂ ಹಟ ಹಿಡಿದಿರುವುದರಿಂದಲೇ ವಿಭಜನೆಯ ಕಾರ್ಯ ನಿಂತುಹೋಗಿತ್ತು. ಇದು ಅಲ್ಲಿಯ ಸಮಾಚಾರ.

ಜಾದೋಜೀ ಭಟ್ಟನು ಪೂಜೆ ಮುಗಿಸಿ ಎದ್ದನು. ಹಿರಿಯ ರಾಜಕುಮಾರ ಅರ್ಜುನಸಿಂಗನಿಗೇ ಸುರೇಂದ್ರ ನಗರವು ಬರಬೇಕೆಂಬುದು ಆ ವೃದ್ಧನ ಕೋರಿಕೆಯಾಗಿತ್ತು. ಅದನ್ನೇ ಹಿರಿಯನಿಗೆ ಕೊಡಿಸಿ, ಎರಡನೇಯವನಿಗೆ ಹೇಗಾದರೂ ಚೂಡಾ ನಗರವೇ ಬರುವಂತೆ ಮಾಡಬೇಕೆಂದು ಆತನು ನಿಶ್ಚಯಿಸಿಕೊಂಡನು.

ಜಾದೋಜೀ ಭಟ್ಟನು ಮರುದಿನ ಬೆಳಿಗ್ಗೆ ರಾಜಾಸ್ಥಾನಕ್ಕೆ ಹೋದನು. ಯಾರೂ ಆತನನ್ನು ಇದಿರು

ಗುಜರಾತೀ ಜಾನಪದ ಕಥೆ

ನೋಡಿರಲಿಲ್ಲ. ಅಂತೆಯೇ ಅಕಸ್ಮಾತ್ತಾಗಿ ವೃದ್ಧ ಪುರೋಹಿತನನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಒಂದು ಕೋಣೆಯಲ್ಲಿ ರಾಜಕುಮಾರರು ಮಾತಾಡಿಕೊಂಡಿರುವಾಗ ಜಾದೋಜೀ ಭಟ್ಟನು ಅಲ್ಲಿಗೆ ಹೋದನು.

"ಶ್ರಮಪಟ್ಟು ನೀವೇಕೆ ಬಂದಿರಿ? ಸಮಾಚಾರ ತಿಳಿದರೆ ನಾವೇ ನಿಮ್ಮ ಬಳಿಗೆ ಬರುತ್ತಿದ್ದೆವಲ್ಲಾ?" ಎಂದು ಆತನನ್ನು ನೋಡಿ ರಾಜಕುಮಾರರಿಬ್ಬರೂ ಉಪಚಾರ ಹೇಳಿದರು.

"ನೀವು ಭಾಗ ಮಾಡಿಕೊಳ್ಳುವಿರೆಂದು ಕೇಳಿ, ನಿಮ್ಮನ್ನು ಆಶೀರ್ವದಿಸಿ ಹೋಗೋಣವೆಂದು ಬಂದೆ, ಕುಮಾರರೇ!" ಎಂದ ಜಾದೋಜೀ ಭಟ್ಟ.

"ಹೇಗೆ ಭಾಗ ಮಾಡುವುದೆಂಬುದು ಇನ್ನೂ ನಿರ್ಣಯವಾಗಲಿಲ್ಲ. ಹಿರಿಯವನಾದುದರಿಂದ ಮೊದಲು ನಾನೇ ಆರಿಸಿಕೊಳ್ಳಬೇಕೆನ್ನುತ್ತೇನೆ. ಆದರೆ ಸಬಲ್ ತಾನು ಚಿಕ್ಕವನಾದುದರಿಂದ ಮೊದಲು ಆರಿಸುವ ಹಕ್ಕು ತನಗೇ ಇದೆ ಎನ್ನುತ್ತಾನೆ. ಯಾವುದು ಉಚಿತವೆಂಬುದನ್ನು ನೀವೇ ನಮಗೆ ಹೇಳಬೇಕು" ಎಂದ ಅರ್ಜುನ ಸಿಂಗು.

"ನಾನು ಹೇಗೆ ಹೇಳಬಲ್ಲೆ? ನೀವಿಬ್ಬರೂ ನನಗೆ ಸಮಾನರು. ಅದಲ್ಲದೆ ರಾಜಕಾರ್ಯಗಳಲ್ಲಿ ತಲೆ ದೂರಿಸುವುದು ನನಗೆ ಒಂದಿಷ್ಟೂ ಇಷ್ಟವಿಲ್ಲ. ನಾನು ಎಲ್ಲಾ ಮುಗಿಸಿ, ರಾಮಾಕೃಷ್ಣಾ ಎನ್ನುತ್ತ ಒಂದು ಕಾಲು ಕಾಡಿಗೆ ಚಾಚಿಕೊಂಡಿರುವವನು" ಎಂದ ಜಾದೋಜೀ ಭಟ್ಟ.

"ಆದುದರಿಂದಲೇ ನಿಮ್ಮ ನಿರ್ಣಯ ನಮಗೆ ಆಗತ್ಯವಾಗಿದೆ. ನೀವು ಹೇಗೆ ಹೇಳುವಿರೋ ಹಾಗೆ ಮಾಡುತ್ತೇವೆ. ನಿಮ್ಮಲ್ಲಿ ನಮಗೆ ಪೂರ್ತಿ ವಿಶ್ವಾಸವಿದೆ" ಎಂದರು ರಾಜಕುಮಾರರಿಬ್ಬರೂ.

"ಹಾಗಿದ್ದರೆ ಕೇಳಿ, ನಿಮಗೊಂದು ಸಣ್ಣ ಕಥೆ ಹೇಳುತ್ತೇನೆ. ಮನಸ್ಸುಗೊಟ್ಟು ಕೇಳಿರಿ. ಪೂರ್ವದಲ್ಲಿ ಒಬ್ಬ ಋಷಿಯ ಹತ್ತಿರ ಇಬ್ಬರು ಶಿಷ್ಯರಿದ್ದರು. ಅವರು ಹನ್ನೆರಡು ವರ್ಷಗಳವರೆಗೆ ಗುರುಶುಶ್ರೂಷೆ ಮಾಡಿ, ಅವನ ಬಳಿಯಲ್ಲಿ ಕಲಿಯುತಕ್ಕುದನ್ನೆಲ್ಲಾ



ಕಲಿತುಕೊಂಡು, ಹೊರಟು ಹೋಗಲು ಗುರುಗಳ ಅಪ್ಪಣೆ ಕೇಳಿದರು. ಆಗ ಆ ಋಷಿ ಅಗ್ನಿಕುಂಡದಿಂದ ಸ್ವಲ್ಪ ಬೂದಿಯನ್ನು ತೆಗೆದು ಇಬ್ಬರು ಶಿಷ್ಯರ ಕೈಗಳಿಗೂ ಹಾಕಿದನು. ಒಬ್ಬ ಶಿಷ್ಯ ಕೂಡಲೇ ಆ ಬೂದಿಯನ್ನು ಬಾಯಿಗೆ ಹಾಕಿ ನುಂಗಿದನು; ಎರಡನೆಯವನು ಅದನ್ನು ಆಚೆಗೆ ಬಿಸುಟುಬಿಟ್ಟನು. ಬೂದಿಯನ್ನು ನುಂಗಿದ ಶಿಷ್ಯನು ಅಖಂಡ ಪಂಡಿತನಾಗಿ, ಬಹಳ ಕೀರ್ತಿಶಾಲಿಯಾಗಿ ಸುಖವಾಗಿ ಬದುಕಿದನು. ಎರಡನೇಯವನು ಕೇವಲ ಮಂದಮತಿಯಾಗಿ, ತನಗೆ ಸರಿಯಾಗಿ ವಿದ್ಯೆ ಕಲಿಸಲಿಲ್ಲವೆಂದು ಗುರುವನ್ನು ನಿಂದಿಸಿದನು. ಹಾಗೆ ನೀವು ನನ್ನನ್ನು ನಿಂದಿಸದಿದ್ದರೆ ನೀವು ಭಾಗ ಮಾಡಿಕೊಳ್ಳಲು, ನಾನು ನಾಳೆ ನಿಮಗೊಂದು ದಾರಿಯನ್ನು ಹೇಳುತ್ತೇನೆ" ಎಂದ ಜಾದೋಜೀ ಭಟ್ಟ.

ಮರುದಿನ ಬೆಳಿಗ್ಗೆ ಆತನು ಹೇಳಿದ ರೀತಿಯಲ್ಲಿ ವಿಭಾಗ ಮಾಡಿಕೊಳ್ಳಲು ರಾಜಕುಮಾರರಿಬ್ಬರೂ ಒಪ್ಪಿದರು. ಜಾದೋಜೀ ಭಟ್ಟನು ಮನೆಗೆ ಹೋಗಿ "ಒಳ್ಳೆಯ ಶಿಷ್ಯನ ಹಾಗೆ ಪ್ರವರ್ತಿಸು, ಎಲ್ಲವೂ ಸರಿಯಾಗಿ ನಡೆಯುತ್ತದೆ" ಎಂದು ಅರ್ಜುನ ಸಿಂಗನಿಗೆ ಒಂದು ಚೀಟು ಬರೆದು ಕಳುಹಿಸಿದನು.

ಮರುದಿನ ಬೆಳಿಗ್ಗೆ ಜಾದೋಜೀ ಭಟ್ಟನು ರಾಜಭವನಕ್ಕೆ ಬಂದನು. ಬೇರೆ ಯಾರೂ ಇಲ್ಲದೆ ರಾಜಕುಮಾರರಿಬ್ಬರು ಮಾತ್ರ ಆತನೊಂದಿಗೆ ಒಂದು ಕೋಣೆಯೊಳಗೆ ಸೇರಿಕೊಂಡರು. ಜಾದೋಜಿ ಭಟ್ಟನು ಎರಡು ಮಡಚಿದ ಕಾಗದಗಳನ್ನು ತೆಗೆದು, "ಇವುಗಳ ಮೇಲೆ ಸುರೇಂದ್ರ ನಗರವೆಂದೂ, ಚೊಡಾ ನಗರವೆಂದೂ ಬರೆದಿದ್ದೇನೆ. ನೀವಿಬ್ಬರೂ ಒಂದೊಂದು ಕಾಗದವನ್ನು ತೆಗೆಯಿರಿ. ಯಾರಿಗೆ ಯಾವ ನಗರದ ಹೆಸರಿರುವ ಚೀಟು ಬರುತ್ತದೋ ಆ ನಗರ ಹಾಗೂ ಅದಕ್ಕೆ ಸೇರಿದ ಆರು ಗ್ರಾಮಗಳನ್ನೂ ತೆಗೆದುಕೊಂಡು ಸಂತೋಷವಾಗಿರಿ" ಎಂದನು.

ಅರ್ಜುನಸಿಂಗು ಚಟ್ಟನೆ ಒಂದು ಚೀಟಿ ತೆಗೆದು ಅದನ್ನು ಬಿಡಿಸಿ ನೋಡದೆಯೇ ಬಾಯೊಳಗೆ ಹಾಕಿ ಅಗಿದು ನುಂಗಿಬಿಟ್ಟನು.

ಸಬಲಸಿಂಗು ಆಶ್ಚರ್ಯದಿಂದ, "ಅದರಲ್ಲಿ ಬರೆದಿರುವುದನ್ನು ನೋಡಲೇ ಇಲ್ಲವಲ್ಲ?" ಎಂದನು.

"ಅದಕ್ಕೇನಿದೆ? ನಿನ್ನ ಚೀಟಿಯಲ್ಲಿ ಬರೆದಿಲ್ಲದ ನಗರ ನನ್ನದೇ ಅಲ್ಲವೆ?" ಎಂದ ಅರ್ಜುನಸಿಂಗು.

ಸಬಲಸಿಂಗು ತನ್ನ ಚೀಟೀ ಬಿಡಿಸಿ ನೋಡಿದಾಗ ಅದರಲ್ಲಿ "ಚೊಡಾ ನಗರ" ಎಂದಿತ್ತು.

ಅದರ ಪ್ರಕಾರವೇ ರಾಜ್ಯ ವಿಭಜನೆ ನಡೆಯಿತು. ಮುದುಕ ಎರಡು ಚೀಟಿಗಳಲ್ಲಿಯೂ "ಚೊಡಾ ನಗರ" ವೆಂದು ಬರೆದು ಮೋಸ ಮಾಡಿದನೆಂದು ಸುರೇಂದ್ರ ನಗರದವರು ಇವತ್ತಿಗೂ ಹೇಳಿ ನಗುತ್ತಾರೆ.



# ಅಡಿಗೆಯವನ ತಂಟೆ

ಒಬ್ಬ ನವಾಬನು ಒಂದುದಿನ ಒಬ್ಬ ಅಮೀರನ ಮನೆಗೆ ಔತಣದೂಟಕ್ಕೆ ಹೋದ. ಆ ನವಾಬನಿಗೆ ಜಿಹ್ವಾಚಾಪಲ್ಯ ಬಹಳ ಜಾಸ್ತಿ. ಅವನು ಹೊತ್ತು ಹೊತ್ತಿಗೂ ರುಚಿರುಚಿಯಾದ ಅಡಿಗೆಗಳನ್ನು ನಿಪುಣರಾದ ಅಡಿಗೆಯವರಿಂದ ಮಾಡಿಸಿಕೊಂಡು ತಿನ್ನುತ್ತಿದ್ದನು. ಆದರೆ ಆ ಅಮೀರನ ಮನೆಯ ಭೋಜನವು ನವಾಬನಿಗೆ ತನ್ನ ಮನೆಯಲ್ಲಿ ತಿಂದ ರುಚಿಗಳಿಗಿಂತಲೂ ವಿಶೇಷ ರುಚಿಯೆನಿಸಿತು.

"ಈ ಅಡಿಗೆಯವ ನಮ್ಮ ರಾಜಭವನದಲ್ಲಿ ಇರಬೇಕಾದವನು. ಅವನನ್ನು ನನಗೆ ಕೊಟ್ಟು ಬಿಡಿರಿ." ಎಂದು ಹೇಳಿ ನವಾಬನು ಅಲ್ಲಿಯ ಅಡಿಗೆಯವನನ್ನು ತನ್ನೊಂದಿಗೆ ಕರೆದುಕೊಂಡು ಹೋಗಿ, ಅವನಿಗೆ ತಿಂಗಳಿಗೆ ಐವತ್ತು ಮೊಹರೀ ಸಂಬಳವನ್ನು ಏರ್ಪಡಿಸಿದನು. ಅದು ವ್ಯರ್ಥ ವೆನಿಸಲಿಲ್ಲ. ಏಕೆಂದರೆ ಅವನ ಅಡಿಗೆ ನಿಜವಾಗಿಯೂ ಅದ್ಭುತವಾಗಿತ್ತು. ಆದುದರಿಂದ ಸ್ವಲ್ಪ ಕಾಲದ ಮೇಲೆ ನವಾಬ ಅವನ ಸಂಬಳವನ್ನು ನೂರು ಮೊಹರಿಗಳನ್ನಾಗಿ ಮಾಡಿದನು.

ಹೀಗೆ ಮಾಡಿದ ಮೇಲೆ ನವಾಬನಿಗೆ ಊಟದ ರುಚಿ ಕಡಮೆಯಾದಂತೆ ತೋರಿತು. ಬರಬರುತ್ತ ಅಡಿಗೆಗಳಲ್ಲಿ ರುಚಿ ತಗ್ಗಿದ್ದು ನಿಜವೆನಿಸಿತು. ಏನು ನಡೆಯುವುದೆಂದು ನೋಡಲು ಅಡಿಗೆಯವನು ಒಂದುಸಾರಿ ಅಡಿಗೇ ಶಾಲೆಗೆ ಹೋದನು. ಅಲ್ಲಿ ಅಡಿಗೆಯವನು ಒಂದು ಆಸನದಲ್ಲಿ ಕುಳಿತುಕೊಂಡು ಹುಕ್ಕಾ ಸೇದುತ್ತಿದ್ದ. ಇಬ್ಬರು ಹೊಸಬರು ಅಡಿಗೇ ಮಾಡುತ್ತಿದ್ದರು. "ಇವರಾರು ?" ಎಂದು ನವಾಬನು ಕೇಳಿದ. "ನನ್ನ ನೌಕರರು" ಎಂದ ಅಡಿಗೆಯವ.

"ನಿನ್ನನ್ನು ಅಡಿಗೆಯವನಾಗಿ ಇಟ್ಟುಕೊಂಡೆನೇ ಹೊರತು ಅಡಿಗೆಯವರ ಯಜಮಾನನನ್ನಾಗಿ ಅಲ್ಲ. ನಿನ್ನ ಸಂಬಳ ಹೆಚ್ಚಿಸಿದ್ದು ನನ್ನ ತಪ್ಪು" ಎಂದು ನವಾಬ ಅವನ ಸಂಬಳ ತಗ್ಗಿಸಿಬಿಟ್ಟ.





# ದೆವ್ವಗಳ ಕೆರೆ

ಬಹಳಕಾಲದ ಹಿಂದೆ ಮಾಂಧವಿ ಎಂಬ ಊರಿಗೆ ಸಮೀಪದಲ್ಲಿ ಒಂದು ದೊಡ್ಡ ಕೆರೆ ಇದ್ದಿತು. ರಣ ಬೇಸಗೆಯಲ್ಲಿ ಕೂಡಾ ಬತ್ತಿ ಹೋಗದಿದ್ದ ಆ ಕೆರೆಯೇ ಊರವರಿಗೆಲ್ಲ ಜೀವನಾಧಾರವಾಗಿದ್ದಿತು. ಹೊಲಗಳಿಗೂ ಪಶುಗಳಿಗೂ, ಸ್ನಾನಪಾನಗಳಿಗೂ ಊರವರು ಆ ಕೆರೆಯ ನೀರನ್ನೇ ಉಪಯೋಗಿಸುತ್ತಿದ್ದರು. ಯಿಲ್ಲದಿರುತ್ತಿದ್ದರೆ ಊರೇ ಇಲ್ಲ ಎಂಬಷ್ಟು ಉಪಯೋಗವಾಗಿತ್ತು, ಆ ಕೆರೆ.

ಊರಿನ ಸ್ಮಶಾನವು ಆ ಕೆರೆಗೆ ಉತ್ತರ ದಿಕ್ಕಿನಲ್ಲಿದ್ದಿತು. ಅಲ್ಲಿ ದಹನ ಸಂಸ್ಕಾರ ಪಡೆದವರೆಲ್ಲ ದೆವ್ವಗಳಾಗಿ ಆ ಕೆರೆಯನ್ನೇ ಆಶ್ರಯಿಸಿಕೊಂಡಿರುವರೆಂದು ನಂಬಿ, ಊರವರು ಆ ಕೆರೆಗೆ ದೆವ್ವಗಳ ಕೆರೆ ಎಂದು ಹೆಸರಿಟ್ಟಿದ್ದರು. ಅಂದರೆ ಬದುಕಿರುವವರಿಗೆ ಮಾತ್ರವಲ್ಲದೆ ಸತ್ತವರಿಗೆ ಕೂಡಾ ಆ ಕೆರೆ ಉಪಯೋಗವಾಗಿತ್ತೆಂದು ಅರ್ಥ. ಅಂತೆಯೇ ಕತ್ತಲೆಯಾದ ಮೇಲೆ ತಮ್ಮಿಂದ ದೆವ್ವಗಳಿಗೆ ತೊಂದರೆಯಾಗಬಾರದೆಂದು ಊರವರಾರೂ ಆ ಕೆರೆಯ ಸಮೀಪಕ್ಕೆ ಹೋಗುವವರಲ್ಲ. ದೆವ್ವಗಳ ಮಹಿಮೆಯಿಂದಲೇ ಆ ಕೆರೆ ಬತ್ತದ ಕೆರೆಯಾಗಿದೆಯೆಂದು ಜನರ ವಿಶ್ವಾಸ.

ಊರೊಳಗಿರುವ ದುಷ್ಟನಾದವನೊಬ್ಬನು ಏನಾದರೂ ಅಪಮೃತ್ಯುವಿಗೀಡಾದರೆ, ದೆವ್ವಗಳೇ ಅವನಿಗೆ ಶಿಕ್ಷೆ ಕೊಟ್ಟುವೆಂದೂ, ಗ್ರಾಮಕ್ಕೆ ಹಿಡಿದ ಪೀಡೆ ಹೋಯಿತೆಂದೂ ಹೇಳುವರು. ಅಲ್ಲಿಯ ದೆವ್ವಗಳು ಒಳ್ಳೆಯವರ ತಂಟೆಗೆ ಹೋಗುವುದಿಲ್ಲವೆಂದು ಊರವರ ನಂಬುಗೆ.

ಆ ಊರಿನಲ್ಲಿ ಮಾರೀಚನೆಂಬ ಒಬ್ಬ ವಿಚಿತ್ರ ಸ್ವಭಾವದ ಮನುಷ್ಯನಿದ್ದ. ಅವನ ಹೆಂಡತಿ ಬಹಳ ಸುಂದರಿಯಾಗಿದ್ದಳು. ಅವಳ ಮೇಲೆ ಮಾರೀಚನ ಪಂಚಪ್ರಾಣಗಳೇ ಇದ್ದುವು. ಆದರೆ ಮಾರೀಚ ಯಾವ ಕೆಲಸವನ್ನೂ ಮಾಡುವುದಿಲ್ಲ. ಅವನ ಹೆಂಡತಿಯೇ ಕೂಲಿನಾಲಿಮಾಡಿ ದುಡಿದು ತನ್ನನ್ನೂ ತನ್ನ ಗಂಡನನ್ನೂ ಪೋಷಣೆ ಮಾಡಿಕೊಂಡಿದ್ದಳು.

ಹೀಗಿರುವಾಗ ಇದ್ದಕಿದ್ದ ಹಾಗೆ ಮಾರೀಚನ ಹೆಂಡತಿ ಕಾಯಿಲೆ ಬಿದ್ದು ಅಕಾಲ ಮರಣಕ್ಕೆ ಗುರಿಯಾದಳು. ತನ್ನ ಹೆಂಡತಿ ಸತ್ತುಹೋದಳೆಂದು ತಿಳಿದ ಕೂಡಲೇ ಮಾರೀಚನು ದುಃಖದಿಂದ ಸ್ಮೃಹೆ ತಪ್ಪಿ ಬಿದ್ದನು. ಸ್ಮೃಹೆ ಕಳೆದುಕೊಂಡು ಬಿದ್ದಿರುವಾಗ ಅವನಿಗೊಂದು ದೃಶ್ಯವು ಕಾಣಿಸಿತು. ಅದೇನೆಂದರೆ,

ಬಿ. ಎನ್. ರಾವ್

ಅನೇಕ ದೆವ್ವಗಳು ತನ್ನ ಹೆಂಡತಿಯನ್ನು ಊರಿನ ಹತ್ತಿರವಿರುವ ಆ ಕೆರೆಯ ಕಡೆಗೆ ಎಳೆದುಕೊಂಡು ಹೋಗುತ್ತಿದ್ದುವು.

ಆ ದೃಶ್ಯವು ಮಾರೀಚನಿಗೆ ಎಷ್ಟೊಂದು ವಾಸ್ತವ ವಾಗಿ ತೋರಿತೆಂದರೆ, ಅವನು ಸ್ಪೃಹೆ ತಿಳಿದು ಎದ್ದ ಕೂಡಲೇ, ತನ್ನ ಹೆಂಡತಿಯ ಹೆಸರು ಹೇಳಿ ಕರೆ ಯುತ್ತ, ಕೆರೆಯ ಕಡೆಗೆ ಓಡ ತೊಡಗಿದನು. ಅವನ ಬುದ್ಧಿ ಕೆಟ್ಟು ಹೋಯಿತೆಂದೂ, ಯಾವುದೋ ಒಂದು ದೆವ್ವವೇ ಅವನನ್ನು ಹಿಡಿಯಿತೆಂದೂ ಊರವರಿಗೆಲ್ಲ ಭಯವಾಯಿತು. ಅದಕ್ಕಾಗಿ ಏನು ಮಾಡಬೇಕೆಂದು ಯಾರಿಗೂ ಗೊತ್ತಾಗಲಿಲ್ಲ.

ಮಾರೀಚನ ಹೆಂಡತಿಯ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ದಹನ ಮಾಡುವ ಕೆಲಸ ಬಹಳ ಕಷ್ಟವಾಯಿತು. "ಬೇಡಿರಪ್ಪಾ, ನನ್ನ ಹೆಂಡತಿ ಯನ್ನು ಸುಟ್ಟು ಹಾಕಬೇಡಿ. ಅವಳು ಸಾಯಲಿಲ್ಲ" ಎಂದು ಮಾರೀಚನು ಹುಚ್ಚು ಹುಚ್ಚಾಗಿ ಕೂಗಿದನು. ಎಲ್ಲರಿಗೂ ಅವನ ಮೇಲೆ ಕನಿಕರವುಂಟಾಯಿತು. ಅವನ ಬುದ್ಧಿ ಪೂರ್ತಿ ಚಲಿಸಿ ಹೋಯಿತು. ಹುಚ್ಚನ ಹಾಗೆ ಆಯಿತು ಮಾರೀಚನ ಅವತಾರ. ಯಾವ ಹೆಂಗುಸು ಇದಿರಾದರೂ ತನ್ನ ಹೆಂಡತಿಯೇ ಎಂಬ ಅನುಮಾನದಿಂದ ಅವಳ ಮುಖದ ಹತ್ತಿರ ಮುಖವನ್ನೊಯ್ದು ನೋಡುವನು. ಗಂಡುಸರನ್ನು ನೋಡಿ, "ನೀನು ತಾನೇ ನನ್ನ ಹೆಂಡತಿಯನ್ನು ಕೆರೆಗೆ ಒಯ್ದವನು ? ನಿಜ ಹೇಳು !" ಎಂದು ಕೂಗುವನು. ಅವನನ್ನು ಇದಿರಿಸುವುದೆಂದರೆ ಊರವರಿಗೆಲ್ಲ ಭಯವೇ. ಅವನು ಬೀದಿಯಲ್ಲಿ ಬರುವ ಸಂಗತಿ ತಿಳಿದರೆ ಎಲ್ಲರೂ ಒಳಗೆ ಸೇರಿ ಬಾಗಿಲು ಹಾಕಿ ಬಿಡುವರು. ಎಂದೋ ಒಂದುದಿನ ಈ ಮಾರೀಚ ಕೂಡಾ ದೆವ್ವವಾಗಿ ಊರಿನವರನ್ನು ಕಾಡುವನೆಂದು ಕೆಲವರು ನಡುಗಿಕೊಂಡಿದ್ದರು. ಮನುಷ್ಯನಾಗಿರು ವಾಗಲೇ ಇಷ್ಟು ಕಾಡುವವನು ದೆವ್ವವಾದ ಮೇಲೆ ಹೇಗೆಲ್ಲ ಕಾಡುತ್ತಾನೋ !

ಭೂತ ವೈದ್ಯರ ಮೂಲಕವಾಗಿ ಮಾರೀಚನಿಗೆ ಚಿಕಿತ್ಸೆ ಮಾಡಿಸುವುದು ಒಳ್ಳೆಯದೆಂದು ಕೆಲವರು



ಹೇಳಿದರು. ಆಗ ಮತ್ತೆ ಕೆಲವರು, ಅದರಿಂದ ಇನ್ನಷ್ಟು ಕೆಡುಕುಗಳನ್ನು ಕೊಂಡುತಂದ ಹಾಗೆ ಆದೀತೆಂದೂ, ಕೆರೆಯಲ್ಲಿರುವ ದೆವ್ವಗಳೆಲ್ಲವೂ ಊರ ಮೇಲೆ ಬಂದು ಬೀಳಬಹುದೆಂದೂ ಹೇಳಿದರು. ಇದೂ ಹೌದೆನಿಸಿ ಆ ಯೋಚನೆ ಕೈಬಿಟ್ಟರು.

ಮಾರೀಚ ಅವನ ಪಾಡಿಗೆ, ತಿಂಡಿ ತೀರ್ಥಗಳ ಎಲ್ಲಾ ಬಿಟ್ಟು, ಕೆರೆಯ ಹತ್ತಿರವಿರುವ ಸ್ಮಶಾನದಲ್ಲೇ ತಿರುಗಲು ಪ್ರಾರಂಭಿಸಿದನು. ತನ್ನ ಹೆಂಡತಿಯನ್ನು ದಹನ ಮಾಡಿದ ಸ್ಥಳದಲ್ಲಿ ಕುಳಿತು ಅಳುವನು. ನರಿಗಳು ಬಂದು ಅವನ ಸುತ್ತಲೂ ಕೂಡುವುವು. ಮಳೆ ಬಂದರೂ ಅವನು ಸ್ಮಶಾನವನ್ನು ಬಿಟ್ಟು ಆಚೆಗೆ ಬರುತ್ತಿರಲಿಲ್ಲ. ಅಲ್ಲಿಯೇ ಮಲಗಿ ನಿಶ್ಚಿಂತೆಯಿಂದ ನಿದ್ದೆಮಾಡುವನು.

ಈ ಸ್ಥಿತಿಯಲ್ಲಿ ಒಂದುದಿನ ಮಾರೀಚನಿಗೆ ಒಂದು ದೃಶ್ಯವು ಕಾಣಿಸಿತು. ಕೆರೆಯೊಳಗಿನಿಂದ ಅನೇಕ ಆಕಾರಗಳು ಮೇಲಕ್ಕೆದ್ದು ಬಂದು ಗುಂಪು ಗೂಡಿ ಕೋಲಾಹಲ ಮಾಡಿಕೊಂಡಿದ್ದುವು. ಅವೆಲ್ಲಾ ದೆವ್ವಗಳೇ ಆದುದರಿಂದ ಅವುಗಳ ಮಧ್ಯೆ ತನ್ನ ಹೆಂಡತಿಯೂ ಇರಬಹುದೆಂದು ಮಾರೀಚನಿಗೆ ತೋರಿತು. ಅಂತೆಯೇ ಅವುಗಳ ಸಮೀಪ ಹೋಗಿ ತನ್ನ ಹೆಂಡತಿಯ ಹೆಸರು ಹೇಳಿ ಕೂಗಿಕೂಗಿ ಕರೆಯ ತೊಡಗಿದನು.

ಅವನ ಕೂಗು ಕೇಳಿ ಕೆಲವು ದೆವ್ವಗಳು ಅವನ ಸಮೀಪ ಬಂದುವು. ಆಗ ಮಾರೀಚ, "ನೀವೇ ನನ್ನ ಹೆಂಡತಿಯನ್ನು ಕರೆದುಕೊಂಡು ಹೋದಿರಿ. ಅವಳನ್ನು ತಂದು ನನಗೆ ತೋರಿಸಿರಿ. ನಾನು ನಿಮಗೆ ಏನು ಕೆಡುಕು ಮಾಡಿದ್ದೇನೆ ?" ಎಂದ ಆ ದೆವ್ವಗಳೊಂದಿಗೆ.

"ಹೌದು. ನಾವು ನಿನ್ನ ಹೆಂಡತಿಯನ್ನು ಕರೆದೊಯ್ದ ಮಾತು ನಿಜವೇ. ಅದು ನಮ್ಮ ಕರ್ತವ್ಯ. ಆದರೆ ಎರಡು ದಿನಗಳ ಹಿಂದೆ ನಿನ್ನ ಹೆಂಡತಿ ಮತ್ತೆ ಸತ್ತು ಹೋದಳು. ಹೇಗೆ ನಿನಗೆ ತೋರಿಸುವುದು ?" ಎಂದುವು ದೆವ್ವಗಳು.

"ಸುಳ್ಳು ! ಸುಳ್ಳು ! ಈ ಮಾತು ಯಾರೂ ನಂಬಲಿಕ್ಕಿಲ್ಲ. ದೆವ್ವಗಳು ಸಾಯುವುದೆಂದರೇನು ?" ಎಂದ ಮಾರೀಚ.



"ನಮಗೂ ಸಾವು ಬರುತ್ತದೆ. ನೀನು ನಿನ್ನ ಹೆಂಡತಿಗಾಗಿ ಅತ್ತು ಅತ್ತು ಕೃಶನಾದ ಹಾಗೆಯೇ ನಿನ್ನ ಹೆಂಡತಿ ಕೂಡಾ ಅತ್ತು ಕೃಶಳಾಗಿ ಸತ್ತು ಹೋದಳು. ನಾವೆಲ್ಲಾ ಈ ದಿನ ಬೇತಾಳನ ಆಜ್ಞೆಯ ಮೇರೆಗೆ ಈ ಕೆರೆಯನ್ನು ಬಿಟ್ಟು ಇನ್ನೊಂದು ಸ್ಥಳಕ್ಕೆ ಹೋಗುತ್ತಿದ್ದೇವೆ. ನಮ್ಮಲ್ಲಿ ನಿನ್ನ ಹೆಂಡತಿ ಇಲ್ಲ; ಬೇಕಾದರೆ ನೀನೇ ನೋಡು" ಎಂದುವು ದೆವ್ವಗಳು.

"ಹಾಗಾದರೆ ಸತ್ತುಹೋದ ನನ್ನ ಹೆಂಡತಿ ಏನಾದಳು ?" ಎಂದು ಮಾರೀಚ ಕೇಳಿದ.

"ಈ ಕೆರೆಯಲ್ಲಿಯೇ ಮೀನಿನ ರೂಪ ಧರಿಸಿ ತಿರುಗುತಿದ್ದಾಳೆ ನಿನ್ನ ಹೆಂಡತಿ. ಈಗ ನಮಗೇ ಅವಳ ಗುರುತು ಸಿಕ್ಕುವುದಿಲ್ಲ. ನೀನು ಅವಳನ್ನು ಮರೆತು ಹೋಗಬಹುದು. ಏಕೆಂದರೆ ಅವಳಿಗೇ ಈಗ ಹಿಂದಿನ ಯಾವ ನೆನಪೂ ಉಳಿದಿರುವುದಿಲ್ಲ" ಎಂದು ಹೇಳಿ ದೆವ್ವಗಳೆಲ್ಲ ಹೊರಟು ಹೋದುವು.

"ಯಾವ ರೂಪದಲ್ಲಿದ್ದರೂ ನನ್ನ ಹೆಂಡತಿಯನ್ನು ನಾನು ಗುರುತಿಸಬಲ್ಲೆ" ಎಂದ ಮಾರೀಚ.

ಮರುದಿನ ಅವನು ಊರೊಳಗೆ ಹೋಗಿ ಒಂದು ಬಲೆಯನ್ನು ತಂದು ಕೆರೆಯಲ್ಲಿರುವ ಮೀನುಗಳನ್ನು ಹಿಡಿದು, ಒಂದೊಂದೇ ಮೀನನ್ನು ಪರೀಕ್ಷಿಸಿ ಬದಿಯಲ್ಲಿಡ ತೊಡಗಿದನು. ಇದನ್ನು ನೋಡಿ ಊರ ಜನರು ಮೀನುಗಳನ್ನು ಕೊಂಡುಕೊಳ್ಳಲು ಬರಲಾರಂಭಿಸಿದರು. ಆದರೆ ಅವರ ಮಾತುಗಳ ಮೇಲೆ ಮಾರೀಚನಿಗೆ ಲಕ್ಷ್ಯವಿರಲಿಲ್ಲ. ಅವನು ಮೀನುಗಳ ಪರೀಕ್ಷೆಯಲ್ಲಿ ಮುಳುಗಿ ಹೋಗಿದ್ದನು.

ಊರವರು ತಮಗೆ ಬೇಕಾದ ಮೀನುಗಳನ್ನು ತೆಗೆದುಕೊಂಡು ಅದಕ್ಕೆ ತಕ್ಕ ದುಡ್ಡನ್ನು ಅಲ್ಲಿಯೇ ಹಾಕಿ ಹೊರಟುಹೋಗ ತೊಡಗಿದರು. ಸಾಯಂಕಾಲವಾಗುವಾಗ ಅವನು ಹಿಡಿದ ಮೀನುಗಳ ರಾಶಿ ಹೋಗಿ ಹಣದ ರಾಶಿ ಉಳಿಯುತ್ತಿತ್ತು.

ಮಾರೀಚನಿಗೆ ತನ್ನ ಹೆಂಡತಿ ಸಿಗುವಳೆಂಬ ನಂಬುಗೆ ಹೋಗಲಿಲ್ಲ. ದಿನಾ ಆ ಕೆರೆಯಲ್ಲಿ ಬಲೆ ಹಾಕಿ ಮೀನುಗಳನ್ನು ಹಿಡಿದು ಒಂದೊಂದೇ ಮೀನನ್ನು ಪರೀಕ್ಷಿಸುತ್ತ ದಿನಗಳನ್ನು ಕಳೆಯುತ್ತಿದ್ದನು. ಹೆಂಡತಿ ಮತ್ತೆ ದೊರೆಯುವಳೆಂಬ ಆಶೆ ಅವನಿಗೆ ಉಂಟಾದ ವೈರಾಗ್ಯವನ್ನು ಹೋಗಲಾಡಿಸಿತು. ಹುಚ್ಚು ಇಳಿದು ಮಾಮೂಲು ಮನುಷ್ಯನ ಹಾಗೇ ಆದನು.

ಮಾರೀಚನು ಬದಲಾಯಿಸಿದನೆಂದೂ, ಮತ್ತೆ ಪ್ರಪಂಚದ ಮೇಲೆ ಬೀಳುವನೆಂದೂ ಊರವರು ಮಾತಾಡ ತೊಡಗಿದರು. ಕೆರೆಯಲ್ಲಿದ್ದ ದೆವ್ವಗಳನ್ನು ಹೋಗಲಾಡಿಸಿದನೆಂಬ ಕೀರ್ತಿ ಕೂಡಾ ಅವನಿಗೆ ದಕ್ಕಿತು. ಕ್ರಮವಾಗಿ ಆ ಕೆರೆಗೆ ಬಿದ್ದ ದೆವ್ವಗಳ ಕೆರೆ ಎಂಬ ಹೆಸರೂ ಅಳಿಸಿಹೋಗಿ, ಮೀನಿನ ಕೆರೆ ಎಂದಾಯಿತು. ಈಗ ರಾತ್ರಿಯೂ ಅಲ್ಲಿ ಭಯವಿಲ್ಲ





# ಮಹಾಭಾರತ

ಧರ್ಮರಾಜನು ತನ್ನ ನಾಲ್ಕು ಮಂದಿ ತಮ್ಮಂದಿರನ್ನು ನೋಡಿ, "ತಮ್ಮಂದಿರೇ, ನಾವಿನ್ನು ಒಂದು ವರ್ಷ ಕಾಲ ಅಜ್ಞಾತವಾಸ ಮಾಡಬೇಕಾಗಿದೆ. ಅದು ಕಠಿನವಾದ ಕಾಲ. ಈ ಒಂದುವರ್ಷದವರೆಗೆ ನಮ್ಮ ಜಾಡು ಯಾರಿಗೂ ತಿಳಿಯಬಾರದು. ಆದುದರಿಂದ ನಾವು ಈ ಅಜ್ಞಾತವಾಸವನ್ನು ಯಾವ ದೇಶದಲ್ಲಿ ಮಾಡೋಣ? ಅಜ್ಞಾತವಾಸ ವ್ರತವು ಜಯಪ್ರದವಾಗಿ ಮುಗಿಯಲು ಯಾವ ದೇಶವು ಸೌಕರ್ಯವೆಂದು ನಿಮಗೆ ತೋರುತ್ತದೆ?" ಎಂದು ಕೇಳಿದನು.

"ಪಾಂಚಾಲ, ಚೇದಿ, ಮತ್ಸ್ಯ, ಶೂರಸೇನ, ಪಟಚ್ಚರ, ದಶಾರ್ಣ, ನವರಾಷ್ಟ್ರ, ಮಲ್ಲ, ಸಾಲ್ವ, ಯುಗಂಧರ, ಕುಂತಿ, ಸುರಾಷ್ಟ್ರ, ಅವಂತಿ ಮುಂತಾದ ಈ ದೇಶಗಳು ಪೈರುಪಚ್ಚೆಗಳಿಂದ ಪುಷ್ಕಳವಾಗಿರುವಂಥವು. ಅವುಗಳಲ್ಲಿ ಯಾವ ದೇಶವಾದರೂ ನಮ್ಮ ಅಜ್ಞಾತವಾಸಕ್ಕೆ ತಕ್ಕುವಾಗಿವೆ. ಜತೆಗೆ ಧರ್ಮದೇವತೆಯ ಅನುಗ್ರಹವೂ ನಮಗಿರುವುದರಿಂದ ನಾವೇನೂ ಅಂಜಬೇಕಾಗಿಲ್ಲ" ಎಂದ ಅರ್ಜುನ.

"ನಿನ್ನ ಮಾತು ನಿಜ. ಈ ಎಲ್ಲಾ ರಾಜ್ಯಗಳಲ್ಲಿ ಮತ್ಸ್ಯ ದೇಶವನ್ನು ಪಾಲಿಸುವ ವಿರಾಟರಾಜನು ಧರ್ಮಶೀಲನೂ, ಬಲವಂತನೂ ಅಲ್ಲದೆ ನಮಗೆ ಶ್ರೇಯಸ್ಸನ್ನು ಬಯಸುವವನೂ ಆಗಿರುವನು. ನಾವು ಒಂದುವರ್ಷವನ್ನು ಅವನ ಬಳಿಯಲ್ಲಿಯೇ ಅಡಗಿದ್ದು ಕಳೆದುಬಿಡೋಣ. ನೀವೆಲ್ಲರೂ ಯಾವ ಯಾವ ವೃತ್ತಿಗಳನ್ನು ಅವಲಂಬಿಸಬೇಕೆಂದಿರುವಿರಿ?" ಎಂದು ಧರ್ಮರಾಜನು ತಮ್ಮಂದಿರನ್ನು ಕೇಳಿದನು.

ಆಗ ಅರ್ಜುನನು ತುಸು ಖೇದಗೊಳ್ಳುತ್ತ, "ಅಣ್ಣಾ, ನಮ್ಮ ಮಾತು ಹೇಗಾದರೂ ಹೋಗುತ್ತದೆ. ಆದರೆ ಯಾರಿಗೂ ಎಂದಿಗೂ ಸೇವೆ ಮಾಡಿ ಅರಿಯದ ನೀನು ವಿರಾಟನ ಆಸ್ಥಾನದಲ್ಲಿ ಯಾವ ವಿಧವಾಗಿ ತಗ್ಗಿಕೊಂಡಿರುವಿಯೋ? ಇದನ್ನು ಯೋಚನೆ ಮಾಡುವಾಗ ನಮಗೆ ಬಹಳ ಚಿಂತೆಯಾಗುತ್ತದೆ" ಎಂದನು.

ಅದಕ್ಕೆ ಧರ್ಮರಾಜನು, "ನಾನು ಒಂದು ನಿಶ್ಚಯಕ್ಕೆ ಬಂದಿದ್ದೇನೆ. ಬ್ರಾಹ್ಮಣವೇಷ ಧರಿಸಿ

೩೮. ಅಜ್ಞಾತವಾಸ ಪ್ರಾರಂಭ



ಕಂಕನೆಂಬ ಹೆಸರನ್ನಿಟ್ಟುಕೊಂಡು, ವಿರಾಟನ ಸಭೆಯಲ್ಲಿ ಸೇರಿಬಿಡುತ್ತೇನೆ. ಪಗಡೆ ಆಟದಲ್ಲಿ ರಾಜನನ್ನೂ, ಮಂತ್ರಿಗಳನ್ನೂ, ಸಾಮಂತರನ್ನೂ ರಂಜಿಸುತ್ತೇನೆ. ಇದಕ್ಕೆ ಮೊದಲು ಏನುಮಾಡುತ್ತಿದ್ದಿ ಎಂದು ಕೇಳಿದರೆ, ಧರ್ಮರಾಜನಿಗೆ ಪ್ರಾಣಸ್ನೇಹಿತನಾಗಿದ್ದನೆಂದು ಹೇಳುತ್ತೇನೆ" ಎಂದು ಹೇಳಿ ಭೀಮನಕಡೆ ತಿರುಗಿ, "ಭೀಮಸೇನಾ, ವಿರಾಟನ ಬಳಿಯಲ್ಲಿ ನೀನು ಯಾವ ಕೆಲಸ ಮಾಡುವವನಾಗಿ ಸೇರಬೇಕೆಂದು ಯೋಚಿಸಿರುವಿ ?" ಎಂದು ಕೇಳಿದನು.

"ನನಗೆ ಅಡಿಗೆ ಮಾಡುವುದಕ್ಕೆ ಚೆನ್ನಾಗಿ ಬರುತ್ತದೆ. ವಲ್ಲವ ಎಂದು ಹೆಸರಿಟ್ಟುಕೊಳ್ಳುತ್ತೇನೆ. ವಿರಾಟನು ಈವರೆಗೂ ತಿನ್ನದಿರುವ ಭಕ್ಷ್ಯ ಭೋಜ್ಯಗಳನ್ನು ತಿನ್ನಿಸುತ್ತೇನೆ. ಆಯುಧವಿಲ್ಲದೆ ಕಟ್ಟಿಗೆ ಸೀಳಿ, ದೊಡ್ಡ ದೊಡ್ಡ ಕಟ್ಟಿಗೆ ಹೊರೆಗಳನ್ನು ಲೀಲಾಜಾಲವಾಗಿ ಹೊತ್ತು ಹಾಕಿ ರಾಜನು ಎಂತಹ ಸಾಹಸ ಕಾರ್ಯಕ್ಕಾದರೂ ನನ್ನನ್ನು ನಿಯೋಜಿಸುವ ಹಾಗೆ ಮಾಡುತ್ತೇನೆ. ರಾಜನ ವಿನೋದಕ್ಕಾಗಿ ಎಂತಹ ಮಲ್ಲರನ್ನಾದರೂ ಜಯಿಸುತ್ತೇನೆ. ಈ ಮೊದಲು ಏನು ಕೆಲಸದಲ್ಲಿದ್ದೆ ಎಂದು ಕೇಳಿದರೆ, ಧರ್ಮರಾಜನ ಹತ್ತಿರ ಸೇವೆಮಾಡಿಕೊಂಡಿದ್ದೆ ಅನ್ನುತ್ತೇನೆ. ನನ್ನ ಗುಟ್ಟು ಹೊರಬೀಳದಂತೆಯೂ ನೋಡಿಕೊಳ್ಳುತ್ತೇನೆ. ಆ ವಿಷಯದಲ್ಲಿ ನೀವೇನೂ ಚಿಂತಿಸಬೇಕಾಗಿಲ್ಲ" ಎಂದು ಹೇಳಿದ ಭೀಮ.

ಅರ್ಜುನನ ಸಮಸ್ಯೆ ಈ ಮೊದಲೇ ಬಗೆಹರಿದ ಸಂಗತಿ. ಅವನನ್ನು ನಪುಂಸಕನಾಗುವಂತೆ ಊರ್ವಶಿ ಶಪಿಸಿದಾಗ, ಇಂದ್ರನು ಆ ಶಾಪವನ್ನು ಅವನ ಅಜ್ಞಾತವಾಸಕಾಲದಲ್ಲಿ ಅನುಭವಿಸುವಂತೆ ಅನುಗ್ರಹಿಸಿದ್ದ. ಅದರಂತೆ ಅರ್ಜುನನು ವಿರಾಟನ ಅರಮನೆಯಲ್ಲಿ ರಹಸ್ಯವಾಗಿರಬಹುದು.

"ನಾನು ಬೃಹನ್ನಳೆ ಎಂಬ ಹೆಸರಿಟ್ಟುಕೊಂಡು, ಕಾಯಿಗಟ್ಟಿದ ನನ್ನ ಮುಂಗೈಗಳು ಕಾಣಿಸದ ಹಾಗೆ ಕಂಕಣಗಳನ್ನು ಹಾಕಿಕೊಂಡು, ಹೆಣ್ಣೂ ಗಂಡೂ ಅಲ್ಲದ ಅವತಾರದಲ್ಲಿ ವಿರಾಟನ ಅಂತಃಪುರವನ್ನು ಪ್ರವೇಶಿಸಿ, ನಾಟ್ಯ ಸಂಗೀತಗಳಿಂದ ಅಂತಃಪುರ ಸ್ತ್ರೀಯರನ್ನು ಸಂತೋಷಗೊಳಿಸುತ್ತೇನೆ. ಮೊದಲು ಏನುಮಾಡುತ್ತಾ ಇದ್ದೆ ಎಂದು ಕೇಳಿದರೆ ದ್ರೌಪದೀ ದೇವಿಗೆ ಪರಿಚರ್ಯೆ ಮಾಡಿಕೊಂಡಿದ್ದೆನೆಂದು ಹೇಳುತ್ತೇನೆ" ಎಂದ ಅರ್ಜುನ.

"ನಾನು ದಾಮಗ್ರಂಥಿ ಎಂಬ ಹೆಸರಿಟ್ಟುಕೊಂಡು ವಿರಾಟನ ಕುದುರೆಗಳಿಗೆ ಶಿಕ್ಷಕನಾಗಿ ಕೆಲಸದಲ್ಲಿ ಸೇರಿಕೊಳ್ಳುತ್ತೇನೆ. ಕುದುರೆಗಳಿಗೆ ಅಂಟಿಕೊಳ್ಳುವ ರೋಗಗಳಿಗೆ ಚಿಕಿತ್ಸೆ ಮಾಡುತ್ತೇನೆ. ನನಗೆ ಅಶ್ವವೈದ್ಯವು ಚೆನ್ನಾಗಿ ಗೊತ್ತಿದೆಯಷ್ಟೆ? ಮೊದಲು ಧರ್ಮರಾಜನ ಬಳಿಯಲ್ಲಿ ಅಶ್ವಾಧಿಕಾರಿಯಾಗಿದ್ದೆನೆಂದು ಹೇಳುತ್ತೇನೆ" ಎಂದು ನಕುಲನು ಹೇಳಿದನು.

"ನಾನು ತಂತ್ರೀಪಾಲನೆಂಬ ಹೆಸರಿಟ್ಟುಕೊಂಡು ವಿರಾಟನ ಗೋವುಗಳ ಪರಿಪಾಲನೆಯನ್ನು ವಹಿ

ಕೊಳ್ಳುತ್ತೇನೆ. ನಾನು ಮೊದಲು ನಿನ್ನ ಆಜ್ಞೆಯ ಪ್ರಕಾರ ಈ ಕೆಲಸ ಮಾಡಿದವನಾದುದರಿಂದ ಅದೇನೂ ನನಗೆ ಹೊಸದಲ್ಲ. ನನಗೆ ದನಗಳನ್ನು ಕುರಿತು ಗೂಳಿಗಳನ್ನು ಕುರಿತು ಎಲ್ಲಾ ಸೂಕ್ಷ್ಮ ವಿಷಯಗಳೂ ಗೊತ್ತಿವೆ" ಎಂದ ಸಹದೇವ.

ದ್ರೌಪದಿ ಏನುಮಾಡುವಳೋ ಎಂದು ಧರ್ಮರಾಜನಿಗೆ ಚಿಂತೆಯಾಯಿತು. ಅವಳು ಸೇವೆ ಮಾಡಿಸಿಕೊಂಡವಳೇ ಹೊರತು ಸೇವೆ ಮಾಡಿದವಳಲ್ಲ. ಸುಕುಮಾರಿಯೂ, ಪತಿವ್ರತೆಯೂ ಆದವಳು ಹೇಗೆ ಒಂದುವರ್ಷ ಕಳೆಯುವಳೋ ?

ಧರ್ಮರಾಜನ ಚಿಂತೆಯನ್ನು ಕುರಿತು ದ್ರೌಪದಿ, "ನನಗಾಗಿ ನೀವಾರೂ ಚಿಂತಿಸಬೇಕಾಗಿಲ್ಲ. ಸೈರಂಧ್ರೀ ವೃತ್ತಿ ಗೌರವನೀಯವಾದುದೇ. ಇತರ ದಾಸಿಯರನ್ನು ನೋಡಿದಂತೆ ಸೈರಂಧ್ರಿಯನ್ನು ಕೀಳು ದೃಷ್ಟಿಯಿಂದ ಯಾರೂ ನೋಡುವುದಿಲ್ಲ. ನಾನು ಅಂತಹ ವೃತ್ತಿಯನ್ನು ಹಿಡಿದು ಸ್ತ್ರೀಯರಿಗೆ ತಲೆಬಾಚಿ, ಬಗೆಬಗೆಯ ಮುಡಿಗಳನ್ನು ಹಾಕುತ್ತ, ಅವರನ್ನೆಲ್ಲ ಸಂತೋಷಪಡಿಸಿಕೊಂಡು ಸುಧೇಷ್ಣೆಯ ಬಳಿಯಲ್ಲಿ ರಹಸ್ಯವಾಗಿ ಕಾಲಕಳೆಯುತ್ತೇನೆ" ಎಂದಳು.

ತಮ್ಮಂದಿರೂ ದ್ರೌಪದಿಯೂ ಮಾಡಿಕೊಂಡ ನಿರ್ಣಯವನ್ನು ಕೇಳಿ ಧರ್ಮರಾಜನು ತೃಪ್ತನಾದನು. ಅವನು ಧೌಮ್ಯರನ್ನೂ ಸೂತರನ್ನೂ ಇತರ ಸೇವಕ ಪರಿವಾರದವರನ್ನೂ ದ್ರುಪದನ ಬಳಿಗೆ ಹೋಗುವಂತೆ ಹೇಳಿದನು. ಇಂದ್ರಸೇನನೇ ಮೊದಲಾದ ಮಂತ್ರಿಗಳನ್ನು ಖಾಲೀ ರಥಗಳೊಂದಿಗೆ ದ್ವಾರಕೆಗೆ ಹೋಗುವಂತೆ ಹೇಳಿದನು. ಪಾಂಡವರು ಎತ್ತ ಹೋದರೆಂಬ ಸಂಗತಿ ತಮಗೆ ತಿಳಿಯದೆಂದು ಹೇಳಬೇಕೆಂದು ಎಲ್ಲರಿಗೂ ಎಚ್ಚರಿಕೆ ಕೊಟ್ಟನು.

ರಾಜರ ಬಳಿಯಲ್ಲಿ ಸೇವಕರಾಗಿರುವವರು ಹೇಗಿರಬೇಕೆಂಬ ಧರ್ಮ ನೀತಿಗಳನ್ನೆಲ್ಲಾ ಧೌಮ್ಯನು ಪಾಂಡವರಿಗೆ ಬೋಧಿಸಿದನು. ಈ ರೀತಿಯಾಗಿ ಉಳಿದವರೆಲ್ಲ ಅವರವರ ದಾರಿಹಿಡಿದು ಹೊರಟುಹೋದ ಮೇಲೆ, ಪಾಂಡವರು ತಮ್ಮ ಆಯುಧಗಳನ್ನೆಲ್ಲಾ ತಮ್ಮೊಂದಿಗೆ ತೆಗೆದುಕೊಂಡು ದ್ವೈತವನದಿಂದ ಹೊರಟರು. ಅವರು ವನಗಳನ್ನೂ, ಬೆಟ್ಟ ಗುಡ್ಡಗಳನ್ನೂ ದಾಟಿ ಮತ್ಸ್ಯ ದೇಶದೊಳಗೆ ಪ್ರವೇಶ ಮಾಡಿದರು. ಆ ಮತ್ಸ್ಯದೇಶವು ದಶಾರ್ಣ ದೇಶಕ್ಕೆ ಉತ್ತರದಲ್ಲಿ ಪಾಂಚಾಲ ದೇಶಕ್ಕೆ ದಕ್ಷಿಣದಲ್ಲಿ ಶೂರಸೇನ ದೇಶಗಳಿಗೆ ಮಧ್ಯದಲ್ಲಿ ಇದ್ದಿತು.



ದ್ರೌಪದಿ ಆ ದೇಶವನ್ನು ನೋಡಿ ತನ್ನವರೊಂದಿಗೆ "ಇನ್ನು ಮುಂದೆ ಹೊಲಗಳ ನಡುವೆ ಹೋಗುವ ದಾರಿಯನ್ನು ನೋಡಿದರೆ, ವಿರಾಟ ನಗರವು ಇನ್ನೂ ಬಹಳ ದೂರವಿರಬೇಕೆಂದು ಕಾಣುತ್ತದೆ. ನಾನು ಬಹಳ ದಣಿದಿದ್ದೇನೆ. ಈ ರಾತ್ರಿ ಇಲ್ಲಿಯೇ ಉಳಿದುಕೊಳ್ಳೋಣ" ಎಂದಳು.

ಧರ್ಮರಾಜನು ಕಾಡುದಾರಿಯನ್ನು ದಾಟಬೇಕೆಂದು ನಿಶ್ಚಯಿಸಿ, ದ್ರೌಪದಿಯನ್ನು ಹೊತ್ತು



ಕೊಂಡು ನಡೆಯುವಂತೆ ಅರ್ಜುನನಿಗೆ ಹೇಳಿದನು. ಆ ವಿಧವಾಗಿ ಬಿಡದೆ ನಡೆದು ಅವರು ವಿರಾಟ ನಗರದ ಸರಹದ್ದನ್ನು ಮುಟ್ಟಿದರು.

ಅಲ್ಲಿ ನಿಂತು ಧರ್ಮರಾಜನು ತಮ್ಮ ಆಯುಧಗಳನ್ನು ಕುರಿತು ಆಲೋಚನೆ ಮಾಡಿದನು. ಅವುಗಳನ್ನು ಹಿಡಿದುಕೊಂಡು ನಗರದೊಳಗೆ ಪ್ರವೇಶಿಸುವುದು ಒಳ್ಳೆಯದಲ್ಲ. ಅದರಲ್ಲಿಯೂ ಅರ್ಜುನನ ಗಾಂಡೀವವೆಂದರೆ ಪ್ರಪಂಚಕ್ಕೇ ತಿಳಿದಿರುವ ಆಯುಧ. ಪಾಂಡವರನ್ನು ಹಿಡಿದುಕೊಡಲು ಅದೊಂದೇ ಸಾಕಾಗಿತ್ತು. ಆದುದರಿಂದ ಆಯುಧಗಳನ್ನು ಸುರಕ್ಷಿತವಾಗಿಡುವ ಒಂದು ಸ್ಥಳವನ್ನು ಹುಡುಕುವಂತೆ ಧರ್ಮರಾಜನು ಅರ್ಜುನನಿಗೆ ಹೇಳಿದನು.

ಅರ್ಜುನನು ನಾಲ್ಕು ದಿಕ್ಕುಗಳನ್ನೂ ಪರೀಕ್ಷಿಸಿ ನೋಡಿದನು. ಆಗ ಸ್ಮಶಾನವೂ ಅದರಲ್ಲಿ ಬಹಳ ಎತ್ತರಕ್ಕೆ ಬೆಳೆದು ಹೋಗಿರುವ ಬನ್ನೀಮರವೂ ಕಾಣಿಸಿತು. ಆ ಪ್ರಾಂತಕ್ಕೆ ಯಾರೂ ಬರುವಂತಿರಲಿಲ್ಲ. ಒಂದುವೇಳೆ ಬಂದರೂ ಬನ್ನೀಮರದ ಮೇಲು ಭಾಗವು ಯಾರ ಕಣ್ಣಿಗೂ ಬೀಳದು. ಆದುದರಿಂದ ತಮ್ಮ ಆಯುಧಗಳನ್ನು ಆ ಮರದ ಕೊಂಬೆಗಳ ಹಾಗು ಎಲೆಗಳ ಗುಂಪಿನ ನಡುವೆ ಅಡಗಿಸಿಡಬೇಕೆಂದು ಅರ್ಜುನನು ನಿಶ್ಚಯಿಸಿಕೊಂಡನು.

ಪಾಂಡವರೆಲ್ಲರೂ ತಮ್ಮ ಧನುಸ್ಸುಗಳ ನಾಣು ಬಿಚ್ಚಿ ನೆಲದಮೇಲಿಟ್ಟರು. ತಮ್ಮ ಖಡ್ಗಗಳನ್ನು ಕೂಡಾ ಧನುಸ್ಸುಗಳೊಂದಿಗೆ ಸೇರಿಸಿದರು. ಧರ್ಮರಾಜನ ಆಜ್ಞೆಯ ಮೇರೆಗೆ ನಕುಲನು ಬನ್ನೀ ಮರದ ಮೇಲೆ ಹತ್ತಿ, ಮಳೆಯ ನೀರು ಕೂಡಾ ಬೀಳದಿರುವಂತಹ ದಟ್ಟವಾದ ಎಲೆಗಳ ನಡುವೆ ಆಯುಧಗಳನ್ನು ಅಡಗಿಸಿಟ್ಟು, ಅವುಗಳ ಮೇಲೆ ಒಂದು ಶವವನ್ನು ಕೂಡಾ ಮುಚ್ಚಿದನು.

ಶವವನ್ನು ಮರದ ಮೇಲೆ ಏರಿಸುವುದನ್ನು ದೂರದಿಂದ ಯಾರೋ ಗೊಲ್ಲರು ನೋಡುತ್ತಿದ್ದಂತೆ ಅನುಮಾನವಾಯಿತು. ಪಾಂಡವರು ಅವರೊಂದಿಗೆ "ನೂರ ಎಂಟುವರ್ಷ ಪ್ರಾಯದವಳಾದ ನಮ್ಮ ತಾಯಿ ಸತ್ತುಹೋದಳು. ನಮ್ಮ ಕುಲಾಚಾರದ ಪ್ರಕಾರ ಆಕೆಯ ಶವವನ್ನು ಬನ್ನೀ ಮರದ ಮೇಲೆ ಇಟ್ಟೆವು" ಎಂದು ಹೇಳಿದರು.

ತರುವಾಯ ಪಾಂಡವರು ವಿರಾಟ ನಗರದ ಕಡೆಗೆ ಹೊರಟರು. ಅವರು ತಮ್ಮೊಳಗೆ ತಾವು ಉಪಯೋಗಿಸಿಕೊಳ್ಳಲು, ಜಯ, ಜಯಂತ, ವಿಜಯ, ಜಯತ್ಸೇನ, ಜಯತ್ಬಲ ಎಂಬ ಸಂಕೇತದ ಹೆಸರನ್ನೂ ಇಟ್ಟುಕೊಂಡರು.

ವಿರಾಟ ನಗರಕ್ಕೆ ಹೋಗುವ ದಾರಿಯಲ್ಲಿ ಧರ್ಮರಾಜನು ದುರ್ಗಾದೇವಿಯನ್ನು ಧ್ಯಾನಿಸಿ, "ತಾಯೇ, ನೀನೇ ನಮಗೆ ಗತಿ. ನಿನಗೇ ಶರಣಾಗಿದ್ದೇವೆ. ಯಾವಾಗಲೂ ನಮ್ಮನ್ನು ಎಚ್ಚರಿಕೆಯಿಂದ ನೋಡಿ ಕಾಪಾಡಿಕೊಂಡಿರಮ್ಮಾ" ಎಂದು ಬೇಡಿಕೊಂಡನು. ಆ ದೇವಿ ತನ್ನ ದಿವ್ಯರೂಪದಿಂದ ಪ್ರತ್ಯಕ್ಷಳಾಗಿ

"ಬೇಗದಲ್ಲೇ ನೀನು ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿ, ಸುಖಗಳನ್ನು ಅನುಭವಿಸುವಿ" ಎಂದು ಹರಸಿ ಅಂತರ್ಧಾನಳಾದಳು. ಇದರಿಂದ ಧರ್ಮ ರಾಜನಿಗೆ ಬಹಳ ಸಮಾಧಾನವೆನಿಸಿತು.

ತರುವಾಯ ಧರ್ಮರಾಜನು ಒಂದು ನದಿಯಲ್ಲಿ ಸ್ನಾನಮಾಡಿ, ಕೈಜೋಡಿಸಿ ಧರ್ಮದೇವತೆಯನ್ನು ಧ್ಯಾನಿಸಿ "ದೇವಾ! ಯಕ್ಷ ರೂಪದಲ್ಲಿ ನನಗೆ ಕೊಡುತ್ತೇನೆಂದು ಹೇಳಿದ ವರವನ್ನು ಈಗ ಕೇಳಿ ಕೊಳ್ಳುತ್ತೇನೆ, ದಯಪಾಲಿಸು" ಎಂದು ಬೇಡಿದನು.

ಆಗ ಇದ್ದಕ್ಕಿದ್ದ ಹಾಗೆ ಧರ್ಮರಾಜನಿಗೆ ಕಾಷಾಯ ವಸ್ತ್ರಗಳಿಂದ, ದಂಡಕಮಂಡಲುಗಳೊಂದಿಗೆ ಕೂಡಿದ ಯತಿಯ ವೇಷವು ಬಂದುಬಿಟ್ಟಿತು. ಉಳಿದವರ ವೇಷಗಳಿಗೆ ಬೇಕಾದ ಸಲಕರಣೆಗಳೆಲ್ಲವೂ ಅಲ್ಲೊಂದು ಬದಿಯಲ್ಲಿ ಪ್ರತ್ಯಕ್ಷವಾದುವು.

ಎಲ್ಲರೂ ಉತ್ಸಾಹದಿಂದ ಒಮ್ಮೆಗೇ ಅವುಗಳ ಮೇಲೆ ಬಿದ್ದು, ತಮತಮಗೆ ಬೇಕಾದುದನ್ನು ತೆಗೆದು ಕೊಂಡು, ತಾವು ತಾವು ಸ್ವೀಕರಿಸುವ ಕೆಲಸಗಳಿಗೆ ತಕ್ಕ ವೇಷಗಳನ್ನು ಹಾಕಿಕೊಂಡು, ತಕ್ಕ ತಕ್ಕ ಸಾಧನಗ ಳೊಂದಿಗೆ ಬದಲಾವಣೆಗೊಂಡು ಕಾಣಿಸಿದರು.

ಧರ್ಮರಾಜನು ತನ್ನ ಉತ್ತರೀಯದ ಕೊನೆಯಲ್ಲಿ ಪಗಡೇಕಾಯಿಗಳನ್ನು ಕಟ್ಟಿಕೊಂಡು, ವಿರಾಟರಾಜನು ಸಿಂಹಾಸನದಲ್ಲಿರುವ ಸಮಯಕ್ಕೆ ಸಭಾಸ್ಥಾನದೊಳಗೆ ಪ್ರವೇಶಿಸಿದನು. ಯತಿಯ ವೇಷದಲ್ಲಿದ್ದರೂ ಧರ್ಮ ರಾಜನ ತೇಜಸ್ಸನ್ನು ನೋಡಿ ವಿರಾಟರಾಜನು ಬೆರ ಗಾದನು. ಆ ಯತಿಯೊಂದಿಗೆ ಪರಿವಾರದವರಾರಾ ದರೂ ಇರುತ್ತಿದ್ದರೆ ಅವನೊಬ್ಬ ಚಕ್ರವರ್ತಿ ಎಂಬ ಭಾವನೆ ವಿರಾಟನಿಗೆ ಉಂಟಾಗುತ್ತಿತ್ತು.

ಧರ್ಮರಾಜನು ವಿರಾಟನ ಬಳಿಗೆ ಹೋಗಿ, "ರಾಜಾ, ನಾನು ಸಮಸ್ತವನ್ನೂ ಕಳೆದುಕೊಂಡು, ಸ್ವಲ್ಪ ಕಾಲ ನಿನ್ನ ಆಸ್ಥಾನದಲ್ಲಿರಬೇಕೆಂಬ ಇಚ್ಛೆಯಿಂದ ಬಂದಿದ್ದೇನೆ. ನಾನು ವೈಯಾಘ್ರಪದ ಗೋತ್ರದವನು. ನನ್ನ ಹೆಸರು ಕಂಕ. ಹಿಂದೆ ನಾನು ಧರ್ಮರಾಜನ ಬಳಿಯಲ್ಲಿ ಅವನ ಆಪ್ತಮಿತ್ರನಾಗಿದ್ದೆ. ಜೂಜಾಟದಲ್ಲಿ ನಾನು ಧರ್ಮರಾಜನಿಂದ ಸೋತುಹೋದರೆ, ಅತ





ಎಂದಿಗೂ ನನ್ನಿಂದ ಧನವನ್ನು ಕೇಳಿದವನಲ್ಲ. ನೀನು ಕೂಡಾ ದೊಡ್ಡ ಮನಸ್ಸಿನವನಾಗಿರುವಿ. ನನ್ನನ್ನು ಹಾಗೆಯೇ ನೋಡಿಕೊಳ್ಳಬೇಕು'' ಎಂದನು.

ಅವನ ಮಾತಿಗೆ ವಿರಾಟನು, "ಹಾಗೇ ಆಗಲಿ. ನನ್ನ ಪರಿವಾರದವರಲ್ಲಿ ಕೂಡಾ ಯಾರಾದರೂ ನಿನಗೆ ಅಪ್ರಿಯವೇನಾದರೂ ಮಾಡಿದರೆ, ಅವರನ್ನು ದಂಡಿಸುತ್ತೇನೆ. ನಿನ್ನ ಹತ್ತಿರ ಯಾರಾದರೂ ಧನಧಾನ್ಯಗಳನ್ನು ಯಾಚಿಸಿದರೆ ನನಗೆ ಹೇಳು. ನಿನ್ನ ಪರವಾಗಿ ನಾನೇ ಅವರಿಗೆ ಕೊಡುತ್ತೇನೆ. ಎಲ್ಲರೂ ನನ್ನನ್ನು ನೋಡಿದ ಹಾಗೆಯೇ ನಿನ್ನನ್ನೂ ನೋಡುತ್ತಾರೆ. ಸಂದೇಹಬೇಡ'' ಎಂದನು.

ಮತ್ತೆ ಸ್ವಲ್ಪ ಹೊತ್ತಿಗೆ ಕಪ್ಪು ಬಟ್ಟೆಗಳನ್ನು ಧರಿಸಿಕೊಂಡು ಭೀಮನು ವಿರಾಟರಾಜನ ಬಳಿಗೆ ಬಂದನು. ಅವನು ಒಂದು ಕೈಯಲ್ಲಿ ಸೌಟು, ಇನ್ನೊಂದು ಕೈಯಲ್ಲಿ ಕತ್ತಿ ಹಿಡಿದಿದ್ದನು. ಅವನು ವಿರಾಟರಾಜನ ಬಳಿಗೆ ಬಂದು, "ರಾಜಾ. ನಾನೊಬ್ಬ ಅಡಿಗೆಯವ. ನನ್ನ ಹೆಸರು ವಲ್ಲವ. ನನ್ನನ್ನು ಅಡಿಗೆ ಕೆಲಸಕ್ಕೆ ನಿಯಮಿಸಿಕೊಂಡರೆ, ಬಗೆಬಗೆಯ ರಸಪಾಕಗಳನ್ನು ಮಾಡಿ ಬಡಿಸಬಲ್ಲೆ" ಎಂದನು.

"ನಿನ್ನನ್ನು ನೋಡಿದರೆ ಅಡಿಗೆ ಮಾಡುವವನೆಂದು ನಂಬಲು ಸಾಧ್ಯವಾಗುವುದಿಲ್ಲ'' ಎಂದ ವಿರಾಟರಾಜ.

"ಅಡಿಗೆಯಲ್ಲಿ ನನ್ನ ಜಾಣತನವೆಷ್ಟೆಂಬುದು ಧರ್ಮರಾಜನಿಗೆ ಗೊತ್ತು. ಅಲ್ಲದೆ ಶರೀರ ಬಲದಲ್ಲಿ ಕೂಡಾ ನಾನು ಎಲ್ಲರನ್ನೂ ಮೀರಿಸಿದವನು. ನಿಮಗೆ ವಿನೋದಿಸಬೇಕಾಗಿದ್ದರೆ ಆನೆಗಳೊಂದಿಗೂ ಸಿಂಹಗಳೊಂದಿಗೂ ಹೋರಾಡುತ್ತೇನೆ'' ಎಂದ ಭೀಮ.

"ಸರಿ. ನೀನು ನಮ್ಮ ಪಾಕಶಾಲೆಯಲ್ಲಿ ಮುಖ್ಯ ಅಡಿಗೆಯವನಾಗಿ ಕೆಲಸ ಮಾಡು'' ಎಂದು ವಿರಾಟನು ಭೀಮನನ್ನು ಅಡಿಗೆ ಶಾಲೆಯ ಕಡೆಗೆ ಕಳುಹಿಸಿದನು.

ಇಷ್ಟರೊಳಗೆ ದ್ರೌಪದಿ ಮಾಸಿದ ಸೀರೆಯನ್ನು ಉಟ್ಟುಕೊಂಡು, ಕೆರಳಿದ ತಲೆ ಗೂದಲಿನೊಂದಿಗೆ ಸೈರಂಧ್ರೀ ವೇಷದಿಂದ ಬೀದಿಯಲ್ಲಿ ತಿರುಗುತ್ತಿದ್ದಳು. ಆಗ ನಗರ ವಾಸಿಗಳು ಅವಳನ್ನು ನೋಡಿ, "ಅಮ್ಮಾ, ಯಾರು ನೀನು? ಏನು ಕೆಲಸ ಮಾಡುವವಳು?'' ಎಂದು ಕೇಳಿದರು.

"ನಾನೊಬ್ಬಳು ಸೈರಂಧ್ರಿ. ಯಾರಾದರೂ ನನ್ನನ್ನು ಪೋಷಿಸುವವರಿದ್ದರೆ, ಅವರಿಗೆ ಇಷ್ಟವಾದ ಸೇವೆಗಳನ್ನು ಮಾಡುತ್ತೇನೆ'' ಎಂದು ಹೇಳಿದಳು.

ಹೀಗೆ ಅವಳು ಅರಮನೆಯ ಹತ್ತಿರ ತಿರುಗಾಡುವುದನ್ನು, ಉಪ್ಪರಿಗೆಯ ಮೇಲೆ ವಿಹರಿಸಿಕೊಂಡಿದ್ದ ಸುಧೇಷ್ಣಾ ರಾಣಿ ನೋಡಿ, ಅವಳನ್ನು ತನ್ನ ಬಳಿಗೆ ಕರೆಯಿಸಿಕೊಂಡಳು. "ಯಾರು ನೀನು? ಏನು ಕೆಲಸ ಮಾಡುವಿ? ಏನು ನಿನ್ನ ಕೋರಿಕೆ?" ಎಂದು ಕೇಳಿದಳು ಸುಧೇಷ್ಣೆ.

ಅದಕ್ಕೆ ದ್ರೌಪದಿ "ದೇವೀ, ನಾನು ಸೈರಂಧ್ರಿ. ನನಗೆ ತಲೆ ಬಾಚಿ ಸೂಡಿ ಹಾಕುವುದು, ಪರಿಮಳ ಲೇಪನಗಳನ್ನು ತಯಾರಿಸುವುದು. ಹೂ ಮುಡಿಸು

ವುದು, ಹೂಮಾಲೆ ಕಟ್ಟುವುದು ಮೊದಲಾದ ಕೆಲಸಗಳು ಗೊತ್ತು. ಕೃಷ್ಣನ ಪತ್ನಿ ಸತ್ಯಭಾಮೆಯನ್ನೂ, ಪಾಂಡವರ ಪತ್ನಿ ದ್ರೌಪದಿಯನ್ನೂ ಮೆಚ್ಚಿಸಿದವಳು ನಾನು. ದ್ರೌಪದಿ ನನ್ನನ್ನು ಮಾಲಿನಿ ಎಂದು ಕರೆಯುತ್ತಿದ್ದಳು, ತಕ್ಕ ಒಡತಿ ನನಗೆ ಬೇಕು" ಎಂದು ದ್ರೌಪದಿ ಬಹಳ ವಿನಯದಿಂದ ಹೇಳಿದಳು.

"ನಿನ್ನನ್ನು ನೋಡಿದರೆ ಹೆಂಗುಸರನ್ನೇ ಆಕರ್ಷಿಸುವವಳ ಹಾಗೆ ಕಾಣಿಸುವಿ. ನಮ್ಮ ಮಹಾರಾಜರು ನಿನ್ನನ್ನು ನೋಡಿಬಿಟ್ಟರೆ, ನನ್ನ ಮುಖ ನೋಡಲಾರರೇನೋ ಅನಿಸುತ್ತದೆ. ಆತನು ನಿನ್ನ ದಾಸನಾಗಿ ಹೋಗುವನೇನೋ ಎಂಬ ಅನುಮಾನದಿಂದ ನಿನ್ನನ್ನು ನಮ್ಮ ಅಂತಃಪುರದಲ್ಲಿಟ್ಟುಕೊಳ್ಳಲು ಅಂಜುತ್ತೇನೆ" ಎಂದಳು ರಾಣಿ ಸುಧೇಷ್ಣೆ.

"ಮಹಾರಾಣೀ, ನನ್ನನ್ನು ವಿರಾಟರಾಜನಾಗಲೀ, ಮತ್ತೆ ಯಾರೇ ಆಗಲೀ ಏನೂ ಮಾಡುವಂತಿಲ್ಲ. ಏಕೆಂದರೆ ಮಹಾಬಲಶಾಲಿಗಳಾದ ಐದು ಮಂದಿ ಗಂಧರ್ವ ರಾಜಕುಮಾರರು ನನ್ನ ಗಂಡಂದಿರು. ಅವರು ನನ್ನನ್ನು ಪ್ರತಿಕ್ಷಣದಲ್ಲಿಯೂ ನೋಡಿಕೊಂಡಿರುತ್ತಾರೆ. ನನ್ನ ಹತ್ತಿರ ಕಾಲು ತೊಳೆಯುವಂತಹ ಕೆಲಸಗಳನ್ನು ಹೇಳದೆ, ಎಂಜಲು ವಸ್ತುಗಳನ್ನು ಕೊಡದೆ ಇದ್ದರೆ ನಾನು ಬಹಳ ಪ್ರೀತಿಯಿಂದ ನಿನ್ನ ಸೇವೆಗಳನ್ನು ಮಾಡಿಕೊಂಡಿರುತ್ತೇನೆ. ನನ್ನನ್ನು ಸಾಧಾರಣ ಸ್ತ್ರೀಯರ ಹಾಗೆ ನೋಡಿ, ನನ್ನ ತಂಟೆಗೆ ಯಾರಾದರೂ ಬಂದರೆ ಮಾತ್ರ ನನ್ನ ಗಂಡಂದಿರು ರಾತಾ ರಾತ್ರಿಯಲ್ಲಿ ಅವರನ್ನು ಕೊಂದು ಬಿಸುಡುತ್ತಾರೆ. ನಾನು ಯಾವ ಪುರುಷರಿಗೂ ಮಣಿಯುವವಳಲ್ಲ" ಎಂದಳು ದ್ರೌಪದಿ. ಈ ಮಾತು ಕೇಳಿ ಸಂತುಷ್ಟಳಾದ ಸುಧೇಷ್ಣೆ ದ್ರೌಪದಿಯನ್ನು ತನ್ನ ಮನೆಯಲ್ಲಿ ನಿಶ್ಚಿಂತೆಯಿಂದ ಇರುವಂತೆ ಹೇಳಿದಳು. ಆಮೇಲೆ ನಪುಂಸಕನ ರೂಪದಲ್ಲಿ ಅರ್ಜುನನು ವಿರಾಟರಾಜನ ಬಳಿಗೆ ಬಂದನು.



ಅರ್ಜುನನು ಬಹಳ ವಿಚಿತ್ರವಾದ ರೂಪದವನಾಗಿ, ಕಡುಗೆಂಪು ಬಣ್ಣದ ಬಟ್ಟೆಗಳನ್ನು ಧರಿಸಿಕೊಂಡಿದ್ದನು. ಅವನು ಸಭಿಕರನ್ನೆಲ್ಲ ದಾಟಿ ಹೋಗಿ ರಾಜನ ಬಳಿಯಲ್ಲಿ ನಿಂತು, "ಮಹಾರಾಜಾ, ನನ್ನ ಹೆಸರು ಬೃಹನ್ನಳೆ; ನಾಟ್ಯಕಲೆಯಲ್ಲಿ ನನ್ನೊಂದಿಗೆ ಸರಿದೂಗುವವರು ಯಾರೂ ಇಲ್ಲವೆಂದು ತಿಳಿಯಿರಿ. ನನಗೆ ಜಡೆ ಹೆಣೆಯುವುದಕ್ಕೂ, ಹೂಗಳನ್ನು ಅಲಂಕರಿಸುವುದಕ್ಕೂ ಬರುತ್ತದೆ" ಎಂದನು.

ವಿರಾಟನು ಅವನ ಮಾತನ್ನು ನಂಬಲು ಶಕ್ಯವಿಲ್ಲದೆ, "ನಿನ್ನ ಉದ್ದವಾದ ಕೈಗಳನ್ನೂ ಉಬ್ಬಿದ ಭುಜಗಳನ್ನೂ ನೋಡುತ್ತಾ ಇದ್ದರೆ ದೊಡ್ಡ ಬಿಲ್ಲುಗಾರನ ಹಾಗೆ ಕಾಣಿಸುವಿ!" ಎಂದನು.

"ಇಲ್ಲ, ಮಹಾರಾಜರೆ, ಬಿಲ್ಲು ಹೇಗಿದೆಯೆಂಬುದೂ ನನಗೆ ಗೊತ್ತಿಲ್ಲ. ಸಂಗೀತ ಹಾಡುತ್ತೇನೆ. ವೀಣೆಯನ್ನೂ ಮೃದಂಗ ಮೊದಲಾದುವನ್ನೂ ಬಾರಿಸುತ್ತೇನೆ. ನಾಟ್ಯವಾಡಬಲ್ಲೆ" ಎಂದ ಅರ್ಜುನ.

ವಿರಾಟನು ತನ್ನ ಮಗಳಾದ ಉತ್ತರೆಯನ್ನು ಕರೆದು, "ಅಮ್ಮಾ, ಇವಳು ಬೃಹನ್ನಳೆ. ಇನ್ನು ಮುಂದೆ ನೀನು ಇವಳ ಬಳಿಯಲ್ಲಿ ನಾಟ್ಯ ವಿದ್ಯೆಯನ್ನು ಕಲಿಯಬೇಕು" ಎಂದು ಹೇಳಿದನು. ಉತ್ತರೆ ಅರ್ಜುನನನ್ನು ಕರೆದುಕೊಂಡು ಅಂತಃಪುರಕ್ಕೆ ಹೊರಟು ಹೋದಳು.

ಸ್ವಲ್ಪ ಹೊತ್ತಿನ ಮೇಲೆ, ವಿರಾಟರಾಜನು ತನ್ನ ಕುದುರೆಗಳನ್ನು ನೋಡಲು ಹೋದಾಗ, ಅಲ್ಲಿ ನಕುಲನು ನಿಂತು ಕುದುರೆಗಳನ್ನು ಪರೀಕ್ಷೆ ಮಾಡುವುದನ್ನು ನೋಡಿದನು. ಅವನನ್ನು ನೋಡಿ ರಾಜನು ತನ್ನವರೊಂದಿಗೆ, "ಆ ಯುವಕನಿಗೆ ಕುದುರೆಗಳ ಲಕ್ಷಣಗಳು ತಿಳಿದಿರುವ ಹಾಗೆ ಕಾಣುತ್ತದೆ. ಅವನನ್ನು ಸಭೆಗೆ ಕಳುಹಿಸಿಕೊಡಿ" ಎಂದು ಹೇಳಿದನು.

ನಕುಲನು ಸಭೆಯಲ್ಲಿ ರಾಜನ ದರ್ಶನ ಮಾಡಿ, "ಮಹಾರಾಜರೆ, ಜೀವನದ ದಾರಿ ಹುಡುಕುತ್ತಾ ನಿಮ್ಮ ದೇಶಕ್ಕೆ ಬಂದೆ. ನನ್ನನ್ನು ತಮ್ಮ ಕುದುರೆಗಳಿಗೆ ಪಾಲಕನನ್ನಾಗಿ ಇಟ್ಟುಕೊಳ್ಳಿ. ಸೊಕ್ಕಿದ ಕುದುರೆಗಳನ್ನು ಮಣಿಸಲಿಕ್ಕೂ, ಕುದುರೆಗಳಿಗೆ ಬರುವ ರೋಗಗಳನ್ನು ಗುಣಪಡಿಸಲಿಕ್ಕೂ ನನಗೆ ಚೆನ್ನಾಗಿ ಗೊತ್ತಿದೆ. ಹಿಂದೆ ನಾನು ಧರ್ಮರಾಜನ ಕುದುರೆಗಳನ್ನೆಲ್ಲ ನೋಡಿಕೊಳ್ಳುವವನಾಗಿದ್ದೆ. ನನ್ನ ಹೆಸರು ದಾಮಗ್ರಂಥಿ" ಎಂದನು.

ವಿರಾಟನು ಅವನ ಮಾತುಗಳಿಗೆ ತೃಪ್ತನಾಗಿ ಅವನನ್ನು ತನ್ನ ಕುದುರೆಗಳಿಗೂ ರಥಗಳಿಗೂ ಅಧಿಪತಿಯನ್ನಾಗಿ ನಿಯಮಿಸಿದನು.

ಮತ್ತೆ ಸ್ವಲ್ಪ ಹೊತ್ತಿಗೆ ಸಹದೇವನು ವಿರಾಟನ ಸಭೆಯೊಳಗೆ ಬಂದನು. ಅಚ್ಚಗೊಲ್ಲನ ವೇಷದಲ್ಲಿ ಕಾಡು ಹೂಗಳ ಮಾಲೆಯೊಂದಿಗೆ, ಹಗ್ಗದ ಸುರುಳಿ ಹಿಡಿದುಕೊಂಡು, ಉದ್ದವಾದೊಂದು ಕೋಲನ್ನೂ ಇಟ್ಟುಕೊಂಡಿದ್ದನು. ಅವನು ರಾಜನ ಬಳಿಗೆ ಬಂದು ವಿನಯದಿಂದ, "ಮಹಾರಾಜಾ, ನಾನು ನಿಮ್ಮ ಗೋವುಗಳಿಗೆ, ರೋಗಗಳ ಬಾಧೆಯಾಗಲೀ, ಜಾರಚೋರರ ಬಾಧೆಯಾಗಲೀ ಬಾರದಂತೆ ನೋಡಿಕೊಳ್ಳಲು ಸಮರ್ಥನಿದ್ದೇನೆ. ಹಸುಗಳೆಲ್ಲಾ ಸಮೃದ್ಧಿಯಾಗಿ ಹಾಲು ಕರೆಯುವಂತೆ ಮಾಡಬಲ್ಲೆ. ನಾನು ಅರಿಷ್ಟನೇಮಿ ಎಂಬ ವೈಶ್ಯರವನು. ಧರ್ಮರಾಜನ ಕೋಟಿ ಗೋವುಗಳು ನನ್ನ ಅಧೀನದಲ್ಲಿದ್ದುವು. ನನ್ನನ್ನು ಎಲ್ಲರೂ ತಂತ್ರೀಪಾಲನೆಂದು ಕರೆಯುತ್ತಾರೆ. ನಿಮ್ಮ ಗೋರಕ್ಷಕನನ್ನಾಗಿ ನನ್ನನ್ನು ಇರಿಸಿ ನೋಡಿ" ಎಂದನು.

ವಿರಾಟನು ತೃಪ್ತನಾಗಿ ಸಹದೇವನನ್ನು ತನ್ನ ಗೋಪಾಲಕನನ್ನಾಗಿ ನಿಯಮಿಸಿದನು,

ಈ ವಿಧವಾಗಿ ಪಾಂಡವರೈವರೂ, ದ್ರೌಪದಿಯೂ ವಿರಾಟ ರಾಜನ ಆಶ್ರಯದಲ್ಲಿ ತಮ್ಮ ಅಜ್ಞಾತವಾಸವನ್ನು ಪ್ರಾರಂಭಿಸಿದರು.






## ೧೫

ಇಪ್ಪತ್ತೊಂದು ಮಂದಿ ಗಣಾಧಿಪತಿಗಳಿಗೂ, ವಿಶ್ವ ರ್ಶಿ ಎಂಬ ಉಪಬ್ರಹ್ಮನ ಕುಮಾರಿಯರಿಗೂ, ವಿವಾಹವಾಗಿ, ಕಾರ್ಯಗಳೆಲ್ಲ ಮುಗಿದ ಮೇಲೆ, ಪಾರ್ವತಿ ಶಿವನನ್ನು ಕುರಿತು, "ಪರಮೇಶ್ವರಾ, ನನ್ನ ಕುಮಾರರಿಗೆ ತಕ್ಕುದಾದ ಅಧಿಕಾರಗಳನ್ನು ಕೊಟ್ಟು, ಗಜಾಸುರನಿಗೆ ಕೊಟ್ಟ ವರವನ್ನು ಸಾರ್ಥಕಗೊಳಿಸಬೇಕು" ಎಂದಳು.

ಶಿವನು ಆಕೆಯ ಕೋರಿಕೆಯನ್ನು ತೀರಿಸಬೇಕೆಂಬ ಆಲೋಚನೆಯಲ್ಲಿದ್ದನು. ಆಗ ಕುಮಾರಸ್ವಾಮಿ ತಂದೆ ತಾಯಿಯರ ಬಳಿಗೆ ಬಂದು, ಎಲ್ಲರ ಹಾಗೆ ತನಗೆ ಕೂಡಾ ಗಣಾಧಿಪತ್ಯವನ್ನು ಕೊಡಬೇಕೆಂದು ವಿನಯದಿಂದ ಕೇಳಿಕೊಂಡನು.

ಆಗ ಅವನನ್ನು ನೋಡಿ ಶಿವನು, "ನಿನಗೆ ಆಗಲೇ ಶಿವಗಣಗಳ ಮೇಲೆ ಅಧಿಪತ್ಯವನ್ನು ಕೊಟ್ಟಿದ್ದೇನಷ್ಟೆ? ಆದುದರಿಂದ ರುದ್ರಗಣಗಳ ಮೇಲಿನ ಅಧಿಕಾರವನ್ನು ಲಕ್ಷ್ಮೀಗಣಾಧಿಪತಿಗೆ ಕೊಡುವುದಾಗಿ ಮಾಡಿದ್ದೇವೆ. ಇದಕ್ಕೆ ನೀನು ಸಂತೋಷದಿಂದ ಒಪ್ಪಿಕೋ ಅಪ್ಪ" ಎಂದನು.

ಆದರೆ ಕುಮಾರಸ್ವಾಮಿ ತಂದೆಯ ಮಾತನ್ನು ಒಪ್ಪಿಕೊಳ್ಳಲಿಲ್ಲ. ತನಗೆ ಕೂಡಾ ಗಣಾಧಿಪತ್ಯವು ಬೇಕೇಬೇಕೆಂದು ಪಟ್ಟುಹಿಡಿದನು.

ಆಗ ಶಿವನು ಕುಮಾರಸ್ವಾಮಿಗೂ, ಲಕ್ಷ್ಮೀಗಣಾಧಿಪತಿಗಳಲ್ಲಿ ಹಿರಿಯವನಿಗೂ ಒಂದು ಪಂಥವನ್ನು ಒಡ್ಡಿದನು. ಅವರಿಬ್ಬರೂ ತಮ್ಮ ತಮ್ಮ ವಾಹನಗಳ ಮೇಲೆ ಹೊರಟು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡುತ್ತ ಭೂಪ್ರದಕ್ಷಿಣೆ ಮಾಡಿ ಕೈಲಾಸಕ್ಕೆ ಹಿಂದಿರುಗಬೇಕು. ಯಾರು ಮೊದಲು ತಿರುಗಿ ಬರುತ್ತಾರೋ ಅವರಿಗೇ ಸರ್ವ ಗಣಾಧಿಪತ್ಯ. ಈ ಪಂಥಕ್ಕೆ ಅವರಿಬ್ಬರೂ ಒಪ್ಪಿದರು. ಶಿವನು ಕುಮಾರಸ್ವಾಮಿಗೆ ನವಿಲನ್ನು ವಾಹನವಾಗಿ ಕೊಟ್ಟು, ಇಲಿಯ ರೂಪದಲ್ಲಿ ತನ್ನ ಬಳಿಯಿದ್ದ ಗಜಾಸುರನನ್ನು ಲಕ್ಷ್ಮೀಗಣಾಧಿಪತಿಗೆ ವಾಹನವಾಗಿ ಕೊಟ್ಟನು. ಕುಮಾರಸ್ವಾಮಿ ನವಿಲಿನ ಮೇಲೇರಿಕೊಂಡು ರಿವ್ವನೆ ಆಕಾಶ ಮಾರ್ಗದಲ್ಲಿ ಹಾರಿ ಹೋದನು. ಲಕ್ಷ್ಮೀಗಣಾಧಿಪತಿಗೆ ಅಂಥ ಸೌಕರ್ಯವಿಲ್ಲದೆ ಹೋಯಿತು.

---

ಹಿಂಬದಿಯ ಚಿತ್ರ ಕಥೆ

---



ಲಕ್ಷ್ಮೀಗಣಾಧಿಪತಿ ಪಾರ್ವತಿಯ ಬಳಿಗೆ ಹೋಗಿ, “ಅಮ್ಮಾ, ನನಗೆ ಎಂತಹ ಅನ್ಯಾಯವಾಗಿದೆಯೋ ನೋಡು! ಕುಮಾರಸ್ವಾಮಿ ಮಹಾಬಲಿಷ್ಠ, ಆಜಾನುಬಾಹು. ಅಂಥವನಿಗೆ ನವಿಲನ್ನು ವಾಹನವಾಗಿ ಕೊಟ್ಟಿದ್ದಾರೆ. ಇನ್ನೇನಿದೆ? ಅವನು ತುರ್ರಂತ ಹಾರಿ ಸುತ್ತಿ ಬಂದುಬಿಡುತ್ತಾನೆ. ನಾವೆಲ್ಲಾ ಕುಳ್ಳರು. ಅದರಲ್ಲೂ ನಾನು ತಲೆ ಭಾರ, ಹೊಟ್ಟೆ ಭಾರಗಳನ್ನು ಹೊತ್ತುಕೊಂಡು ಇಲಿಯ ಮೇಲೆ ಹೇಗೆತಾನೇ ಪ್ರಯಾಣ ಮಾಡಲಿ? ಇಂತಹ ಪರೀಕ್ಷೆ ಇಡುವುದಕ್ಕಿಂತಲೂ ನಮಗೆ ಅಧಿಕಾರ ಕೊಡುವುದಿಲ್ಲವೆಂದು ಹೇಳಿಬಿಟ್ಟಿದ್ದರೆ ಸರಿಯಾಗುತ್ತಿತ್ತಲ್ಲವೆ?” ಎಂದನು.

“ಅಪ್ಪಾ, ನಿನ್ನ ಮಾವಯ್ಯನಾದ ವಿಷ್ಣುವಿನ ಬಳಿಗೆ ಹೋಗಿ ಏನಾದರೂ ಉಪಾಯ ಕೇಳು. ಅವನು ಹೇಳಿದಂತೆ ಮಾಡು” ಎಂದು ಪಾರ್ವತಿ ಲಕ್ಷ್ಮೀಗಣಾಧಿಪತಿಯೊಂದಿಗೆ ಹೇಳಿದಳು. ಅದರಂತೆ ಲಕ್ಷ್ಮೀಗಣಾಧಿಪತಿ ವಿಷ್ಣುವಿನ ಬಳಿಗೆ ಹೋಗಿ, ತನಗಾದ ಅನ್ಯಾಯವನ್ನು ಹೇಳಿ, “ನಾನು ಕುಮಾರಸ್ವಾಮಿಯೊಂದಿಗೆ ಸ್ಪರ್ಧೆಗೆ ನಿಂತು ಭೂಪ್ರದಕ್ಷಿಣೆ ಮಾಡಬಲ್ಲೆನೆ? ಕುಮಾರಸ್ವಾಮಿ ಆಗಲೇ ಹೊರಟುಹೋದದ್ದೂ ಆಯಿತು. ನನಗೆ ಉಪಕಾರ ಬರುವ ಮಾರ್ಗ ಯಾವುದೆಂಬುದನ್ನು ನೀನೇ ಹೇಳಬೇಕು ಮಾವಯ್ಯಾ” ಎಂದನು.

“ಅದಕ್ಕಾಗಿ ಚಿಂತಿಸಬೇಡಪ್ಪ, ಶಿವಪಂಚಾಕ್ಷರೀ ಮಂತ್ರವನ್ನು ಐದು ಲಕ್ಷಸಾರಿ ಜಪಿಸಿ ಪಾರ್ವತೀ ಪರಮೇಶ್ವರರ ಸುತ್ತಲೂ ಮೂರು ಪ್ರದಕ್ಷಿಣೆ ಹಾಕಿಬಿಡು. ಇಷ್ಟು ಮಾಡಿದರೆ ನಿನಗೆ ಭೂಪ್ರದಕ್ಷಿಣೆ ಮಾಡಿದ ಫಲವೂ, ತೀರ್ಥಯಾತ್ರೆಯ ಫಲವೂ ಸಿಕ್ಕಿಬಿಡುತ್ತದೆ” ಎಂದ ವಿಷ್ಣು.

ಲಕ್ಷ್ಮೀಗಣಪತಿ ವಿಷ್ಣು ಹೇಳಿದಂತೆ ಶುಚಿರ್ಭೂತನಾಗಿ, ಒಂದು ಸ್ಥಳದಲ್ಲಿ ದರ್ಭಾಸನದ ಮೇಲೆ ಕುಳಿತು ತದೇಕ ಚಿತ್ತನಾಗಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸತೊಡಗಿದನು.

ಇಷ್ಟರೊಳಗೆ ಕುಮಾರಸ್ವಾಮಿ ನವಿಲು ವಾಹನದ ಮೇಲೆ ಮೊದಲನೇ ತೀರ್ಥದ ಕಡೆಗೆ ಹೋಗುವಾಗ, ಅಲ್ಲಿ ಲಕ್ಷ್ಮೀಗಣಪತಿ ಆಗಲೇ ಸ್ನಾನಮುಗಿಸಿ ಹೊರಟು ಹೋಗುವುದನ್ನು ದೂರದಿಂದಲೇ ನೋಡಿದನು. ಕುಮಾರಸ್ವಾಮಿ ಸಮೀಪ ಹೋಗಿ ನೋಡಿದಾಗ, ಅಲ್ಲಿಯ ಮರಳಿನಲ್ಲಿ ಇಲಿಯ ಹಜ್ಜೆಯ ಗುರುತು ಸ್ಪಷ್ಟವಾಗಿ ಮೂಡಿದ್ದುವು.

ಕುಮಾರಸ್ವಾಮಿ, ಆ ತೀರ್ಥದಲ್ಲಿದ್ದವರ ಹತ್ತಿರ, “ಅಯ್ಯಾ, ಇಲ್ಲಿಗೆ ದೊಡ್ಡ ಹೊಟ್ಟೆಯವನೊಬ್ಬ ಇಲಿಯ ಮೇಲೆ ಕುಳಿತುಕೊಂಡು ಬಂದು ಸ್ನಾನ ಮಾಡಿ ಹೋದನೆ?” ಎಂದು ಕೇಳಿದನು.

“ಹೌದಲ್ಲ, ಈಗ ತಾನೇ ಹೋದ. ಅಗೋ, ದೂರದಲ್ಲಿ ಇನ್ನೂ ಕಾಣಿಸುತ್ತಿದ್ದಾನೆ. ದೊಡ್ಡ ಪುಣ್ಯಾತ್ಮ, ನಮಗೆಲ್ಲಾ ತಲಾ ಒಂದೊಂದು ಸುವರ್ಣವನ್ನು ದಾನಮಾಡಿದ” ಎಂದರು ಅಲ್ಲಿದ್ದವರು.

"ಆಹ! ಗಿಡ್ಡಗುಂಡ ಎಷ್ಟು ಗಡುಸಾಗಿದ್ದಾನೆ! ನಾನಿನ್ನು ಇಲ್ಲಿ ವ್ಯರ್ಥವಾಗಿ ಸ್ನಾನಮಾಡುತ್ತ ಕಾಲ ಯಾಪನೆ ಮಾಡಬಾರದು. ಮುಂದಿನ ತೀರ್ಥಕ್ಕೆ ಬೇಗನೇ ಹೋಗಬೇಕು" ಎಂದುಕೊಂಡು ಕುಮಾರ ಸ್ವಾಮಿ, ಬೇಗಬೇಗನೆ ಮುಂದಿನ ಕ್ಷೇತ್ರಕ್ಕೆ ಪ್ರಯಾಣ ಹಾರಿದನು. ಆದರೆ ಅವನು ಅಲ್ಲಿಗೆ ಸೇರುವಷ್ಟ ರೊಳಗೆ ಲಕ್ಷ್ಮೀಗಣಪತಿ ಆಗಲೇ ಆ ತೀರ್ಥದಲ್ಲಿ ಸ್ನಾನ ಮುಗಿಸಿ ಹೊರಟು ಹೋಗಿದ್ದಾನೆಂದು ಸ್ಪಷ್ಟವಾಗಿ ಅವನಿಗೆ ತಿಳಿಯಿತು!

ಎಲ್ಲಿಗೆ ಹೋದರೂ ಕುಮಾರಸ್ವಾಮಿಗೆ ಇದೇ ಅನುಭವವಾಯಿತು. ಆವನು ಯಾವ ತೀರ್ಥ ದಲ್ಲಿಯೂ ಸ್ನಾನ ಮಾಡದೆಯೇ ಭೂಪ್ರದಕ್ಷಿಣೆ ಮಾಡಿ ಕೈಲಾಸಕ್ಕೆ ಹಿಂದಿರುಗಿದನು. ಅಷ್ಟರೊಳಗೆ ಲಕ್ಷ್ಮೀಗಣಪತಿ ಐದು ಲಕ್ಷ ಶಿವಪಂಚಾಕ್ಷರೀ ಜಪ ಮುಗಿಸಿ, ಪಾರ್ವತೀ ಪರಮೇಶ್ವರರ ಸುತ್ತಲೂ ಮೂರು ಸಾರಿ ಪ್ರದಕ್ಷಿಣೆ ಮಾಡಿ ಅವರ ಮುಂದೆ ಕೈಜೋಡಿಸಿ ನಿಂತುಕೊಂಡನು.

ಇದನ್ನು ನೋಡುತ್ತಾ ಸಭೆಯಲ್ಲಿದ್ದವರು, ತಮ್ಮೊಳಗೆ ಗುಸಗುಸ ಮಾತಾಡಿಕೊಳ್ಳುತ್ತಿದ್ದರು. "ಈ ಲಕ್ಷ್ಮೀಗಣಪತಿ ಭೂಪ್ರದಕ್ಷಿಣೆ ಮಾಡದೆ ಕುಳಿತಲ್ಲೇ ಗಣಾಧಿಪತ್ಯ ಸಂಪಾದಿಸುವನೆಂದು ಕಾಣುತ್ತೆ!" ಎಂದು ಅವರಿಗೆಲ್ಲ ತೋರುತ್ತಿದ್ದಿತು.

ಆಗ ಕುಮಾರಸ್ವಾಮಿ ಹಿಂದಿರುಗಿ ಬಂದು, ಪಾರ್ವತೀ ಪರಮೇಶ್ವರರೊಂದಿಗೆ "ನಾನು ಗಣಾಧಿಪತ್ಯಕ್ಕೆ ತಕ್ಕವನಲ್ಲ; ಲಕ್ಷ್ಮೀಗಣಪತಿಯೇ ಗಣಾಧಿಕಾರಕ್ಕೆ ತಕ್ಕವನಾಗಿರುವನು" ಎಂದನು.

ಆ ಮಾತು ಕೇಳಿ ಶಿವ ಸಭೆಯಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಪಾರ್ವತೀ ಪರಮೇಶ್ವರರೂ ಆಶ್ಚರ್ಯವನ್ನು ತೋರಿಸುತ್ತ, "ಏಕೆ ಹೀಗೆ ಹೇಳುವೆಯಪ್ಪ? ನಾವು ಹೇಳಿದಂತೆ ನೀನು ಮಾಡಿದೆಯೋ ಇಲ್ಲವೋ?" ಎಂದು ಕುಮಾರ ಸ್ವಾಮಿಯನ್ನು ಕೇಳಿದರು.

"ನಾನು ಪ್ರಪಂಚದಲ್ಲಿರುವ ಎಲ್ಲಾ ಕ್ಷೇತ್ರಗಳಿಗೂ ಹೋದೆ. ಆದರೆ ಯಾವ ತೀರ್ಥದಲ್ಲಿಯೂ ಸ್ನಾನ



ಮಾಡಲಿಲ್ಲ. ಏಕೆಂದರೆ ಪ್ರತಿ ತೀರ್ಥದಲ್ಲಿಯೂ ಈ ಲಕ್ಷ್ಮೀಗಣಪತಿ ನನಗಿಂತ ಮೊದಲೇ ಸ್ನಾನಮಾಡಿ ಹೊರಟು ಹೋಗುತ್ತಿರುವುದನ್ನು ನಾನೇ ಪ್ರತ್ಯಕ್ಷ ನೋಡಿದೆ. ತೀರ್ಥವಾಸಿಗಳೂ ಹೇಳಿದರು. ಅವನು ನನಗಿಂತಲೂ ಎಷ್ಟೋ ಸಮರ್ಥನು. ಆದುದರಿಂದ ರುದ್ರಗಣಗಳಿಗೆ ನಾಯಕನಾಗಿರಲಿಕ್ಕೆ ಅವನೇ ತಕ್ಕವನು. ಪಂಥದಲ್ಲಿ ಅವನೇ ಗೆದ್ದಿರುವನು" ಎಂದ ಕುಮಾರಸ್ವಾಮಿ.

ಆಗ ಸಭೆಯಲ್ಲಿದ್ದವರಿಗೆಲ್ಲಾ ಶಿವಪಂಚಾಕ್ಷರೀ ಮಂತ್ರದ ಪ್ರಭಾವ ಎಷ್ಟೆಂಬುದು ಗೊತ್ತಾಯಿತು. ಲಕ್ಷ್ಮೀಗಣಪತಿಯನ್ನೇ ರುದ್ರಗಣಗಳಿಗೆ ಅಧಿಪತಿಯನ್ನಾಗಿ ಮಾಡಲು ಎಲ್ಲರೂ ಒಮ್ಮನಸ್ಸಿನಿಂದ ಒಪ್ಪಿಕೊಂಡರು. ಅವನನ್ನು ಗಣಾಧಿಪತಿಯನ್ನಾಗಿ ಅಭಿಷೇಕಿಸಲು ಭಾರಿ ಸನ್ನಾಹ ನಡೆಯತೊಡಗಿತು.

ರುದ್ರಗಣಗಳಲ್ಲಿ ಕೆಲವರು ಹೋಗಿ ಪುಣ್ಯನದಿಗಳ ಜಲಗಳನ್ನು ತಂದರು. ಮತ್ತೆ ಕೆಲಮಂದಿ ಗಣಗಳು ಸಪ್ತಸಮುದ್ರಗಳ ಜಲಗಳನ್ನು ತಂದರು. ಪ್ರಮಥ, ಭೂತಗಣಗಳನ್ನೂ, ಗರುಡ, ಗಂಧರ್ವ, ಕಿನ್ನರ, ನಾಗ, ಭೂಲೋಕವಾಸಿಗಳನ್ನೂ ಆಹ್ವಾನ ಮಾಡಿದರು. ಬೃಹಸ್ಪತಿ ಇಟ್ಟ ಮುಹೂರ್ತದಲ್ಲಿ ಲಕ್ಷ್ಮೀಗಣಪತಿಯನ್ನು, ಅವನ ಹೆಂಡತಿಯಾದ ಜಯಲಕ್ಷ್ಮಿಯೊಂದಿಗೆ, ನವರತ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಸಮಸ್ತ ಗಣಗಳ ಮೇಲೆಯೂ ಅವನಿಗೆ ಅಧಿಪತ್ಯ ಬರುವಂತೆ ಅಭಿಷೇಕ ಮಾಡಿದರು. ಪಾರ್ವತೀ ಪರಮೇಶ್ವರರು ಅವನಿಗೆ ಅಭಿಷೇಕ ಮಾಡುತ್ತ, "ನೀನೂ ನಿನ್ನ ತಮ್ಮಂದಿರೂ ಮೂರು ಲೋಕಗಳನ್ನೂ ಪಾಲಿಸುತ್ತ, ನಿಮ್ಮನ್ನು ಧ್ಯಾನಿಸಿದವರಿಗೆ, ಪೂಜಿಸಿದವರಿಗೆ, ನಿಮ್ಮನ್ನು ಕುರಿತು ತಪಸ್ಸು ಮಾಡುವವರಿಗೆ ಅವರ ಕಾರ್ಯಗಳು ಸಫಲವಾಗುವಂತೆ ನೋಡಿರಿ" ಎಂದು ಕಟ್ಟಳೆ ಮಾಡಿ ಹೇಳಿ ಹರಸಿದರು.

ಇದು ಹೀಗಿರುವಾಗ, ತಾರಕಾಸುರನು ಸತ್ತು ಹೋದ ಅನಂತರ, ಅವನ ಹೆಂಡತಿ ತನ್ನ ಕುಮಾರರಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ಮೂವರನ್ನೂ ಕರೆದುಕೊಂಡು ರಸಾತಳಕ್ಕೆ ಓಡಿ ಹೋಗಿದ್ದಳು. ಅವಳು ಅಲ್ಲಿ ತನ್ನ ಕುಮಾರರಿಗೆ ಶುಕ್ರಾಚಾರ್ಯರಿಂದ ಸಕಲ ವಿದ್ಯೆಗಳನ್ನೂ ಹೇಳಿಸುತ್ತ ಅವರನ್ನು ಒಳ್ಳೆಯ ರೀತಿಯಲ್ಲಿ ಬೆಳೆಸಿ ದೊಡ್ಡವರನ್ನಾಗಿ ಮಾಡಿದಳು.

ಆ ಮೂವರು ಕುಮಾರರೂ ದೊಡ್ಡವರಾದ ಮೇಲೆ ತಮ್ಮ ತಂದೆ ಹೇಗೆ ಸತ್ತುಹೋದನೆಂಬುದನ್ನು ತಿಳಿದುಕೊಂಡರು. ಆಮೇಲೆ ಅವರು ಏನೋ ನಿರ್ಧಾರಕ್ಕೆ ಬಂದು ಮೇರುಪರ್ವತಕ್ಕೆ ಹೋಗಿ ಬ್ರಹ್ಮನನ್ನು ಕುರಿತು ಬಹುದೀರ್ಘವಾಗಿ ಕಠಿನ ತಪಸ್ಸು ಮಾಡಲು ತೊಡಗಿದರು.



# ೧೨೫. ಕೊಫುಕುಜಿ ಪಗೋಡಾ

ಜಪಾನಿನ "ನರ" ಎಂಬ ಪ್ರಾಚೀನ ನಗರದಲ್ಲಿ ಈ ಐದಂತಸ್ತಿನ ಪಗೋಡಾ ಸುಮಾರು ೫೫೦ ವರ್ಷಗಳ ಕೆಳಗೆ ನಿರ್ಮಿಸಲ್ಪಟ್ಟಿತು. ಕಂಚಿನಿಂದಾದ ಇದರ ಶಿಖರ ಮಿಂಚನ್ನು ನಿಗ್ರುಸುತ್ತದೆ. ಈ ಪಗೋಡಾದ ಎತ್ತರ ೧೭೫ ಅಡಿಗಳು. ಮುಂದೆ ಕಾಣಿಸುವ ಕೆರೆಯ ಹೆಸರು "ಸರುಸವ"



Photo by R. B. Shinde



ಬಹುಮಾನ
ಪಡೆದ ಶೀರ್ಷಿಕೆ

ಬಾನಲೊಂದು ಮುತ್ತು

ಕಳುಹಿಸಿದವರು :
ಕೆ. ಆರ್. ಶ್ರೀನಿವಾಸಗುಪ್ತ,

Photo by S. B. Takalkar



ನಂ. ೧೬, ಮಾವಳ್ಳಿ ಟಾಂಕ್
ಬಂಡ್‌ರೋಡ್, ಬೆಂಗಳೂರು-೨

**ಕೈಯಲೊಂದು ತುತ್ತು**

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಮೇ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಗೆದ್ದ ಶೀರ್ಷಿಕೆಗಳು ಜೂಲೈ '೭೨ರ ಸಂಚಿಕೆಯಲ್ಲಿ ಪ್ರಕಟವಾಗುತ್ತದೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
**ಜಾನಪದ ವಿದ್ಯೆಗಳು**
(ಉತ್ತರ ಪ್ರದೇಶ್)

ಮೂರನೇ ಹೊದಿಕೆಯ ಚಿತ್ರ:
**ಜಾನಪದ ವಿದ್ಯೆಗಳು**
(ಹರ್ಯಾನಾ).


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-26. Controlling Editor: 'CHAKRAPANI'

# ಟ್ಯಾಬಿ ಯಿಂದ ಪರೀಕ್ಷೆಯಲ್ಲಿ ಸಹಾಯ






























dCP/GLT/9a kan

# ಸರಿ ಆಡಿದಿಯಾ...

























ಫೋರ್‌ಹನ್ಸ್
ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್

49F-203R-KAN